-/10

ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 83

ವಿಚಾರ ಸಾಹಿತ್ಯ

# ಬುದ್ಧನ ಜಾತಕ

ಶಂ. ಬಾ. ಜೋಶಿ






ಕರ್ನಾಟಕ ಸರ್ಕಾರ 1983

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

ಈ 'ಪ್ರಾ...

...ದು.

...ವೆರಡರಲ್ಲಿ
ಹಕ್ಕು ಅವರವರಿಗಿದೆ.
ಅರುಹುವ ಈ ಪುಸ್ತಕವು
ಸಮಷ್ಟಿಯ ಮೂಲಕ

'ಮನು'ಕುಲಕ್ಕೆ ಅರ್ಪಿತ.

# ಬುದ್ಧನ ಜಾತಕ

ಡಾ. ಶಂ. ಬಾ. ಜೋಶಿ




ವಿಶ್ವ ಕನ್ನಡ ಸಮ್ಮೇಳನ
14–3 ಎ, ನೃಪತುಂಗ ರಸ್ತೆ. ಬೆಂಗಳೂರು–560 002

BUDHANA JATAKA- Birth of Reason (A Comparative Study of the Indo-Greekian Sources) by Dr. S. B. Joshi Published by K. Jayacharya, K.A.S., Additional Director, Directorate of Kannada and Culture (Vishwa Kannada Sammelana), 14/3 A, Nrupatunga Road, Bangalore-560 002.

Pages 48+96=144+IV, 1983—5000 Copies





ಎರಡನೆಯ ಮುದ್ರಣ



ಬೆಲೆ : ಒಂದೂವರೆ ರೂಪಾಯಿ

ಮುದ್ರಕರು :
ಫ. ಶಿ. ಭಾಂಡಗೆ
ತ್ವರಿತ ಮುದ್ರಣಾಲಯ
ಗಂಗಾಪೂರಪೇಟ, ಗದಗ–582 101

ಆರ್. ಗುಂಡೂರಾವ್
ಮುಖ್ಯ ಮಂತ್ರಿ




ವಿಧಾನ ಸೌಧ
ಬೆಂಗಳೂರು
ದಿನಾಂಕ ೧೮-೯-೧೯೮೨

# ಸಂಕಲ್ಪ...ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒಡಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ಸಫೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು.

# ಅರಿಕೆ

ವೈವಸ್ವತೋ ಮನುರ್ನಾಮ
ಮಾನನೀಯೋ ಮನೀಷಿಣಾಮ್ ।
ಆಸೀತ್ ಕ್ಷಿತೀನಾಂ ಆದ್ಯಃ
ಅಗ್ನಿಃ ಜಾತವೇದ ಇವಃ
(ಕಾಲಿದಾಸನ ಕ್ಷಮೆ ಕೋರಿ)

I

ಸರಲ ರೇಷೆಯ ಪ್ರಜ್ಞೆ ಇಲ್ಲದೆ, ವಕ್ರದ ಅರ್ಥವು ಆಗಲಾರದು. ಮೂಲ ಬಣ್ಣಗಳ ಬಗೆಗೆ ಖಾತ್ರೀ ಇಲ್ಲದವರಿಗೆ, ಸಂಯುಕ್ತ ಬಣ್ಣದ ನೆಲೆ ತಿಳಿಯಲಾರದು. 'ಆದಿಕಾರಣ'ದ ಪ್ರಚೋದನೆಯಿಲ್ಲದೆ, ಈ ಧರ್ಮ=ಸಂಸ್ಕೃತಿಯು ಆಕಾರ ಪಡೆಯಲಾರದು. ಆದರೆ "ಮನುಷ್ಯಾಣಾಂ ಬಂಧ ಮೋಕ್ಷಯೋಃ" 'ಆದಿಕಾರಣ' ಎಂಬ ಹಾಗಿನ ಈ ಮನೋರೂಪೀ ವೈವಸ್ವತ (ಸವಿತೃ) ಮನುವನ್ನೇ ಮರೆಯಿಸಿ ಬಿಡಲಾಗಿದೆ!" ನಾವು ಮರೆತುಬಿಟ್ಟಿದ್ದೇವೆ! ಅಪರಾಧ ಯಾರದು? ಮರೆತವರೇ ಹೆಚ್ಚಿನ ಅಪರಾಧಿಗಳು ತಾನೆ?

ಈ ಮನಃಶಕ್ತಿಯ ಪ್ರೇರಣಾ ಕೇಂದ್ರವಾದ (ಮನು) ವೈವಸ್ವತ> ವಿವಸ್ವನ್ ಇವನು ಆದಿತ್ಯ ರೂಪಕ್ಕೆ ಮಾರ್ಪಟ್ಟಿದ್ದಾನೆ. ಎಂದು ನಂಬಿಸಲಾಗಿದೆ! ನಮ್ಮವರು ನಂಬಿದ್ದೂ ಆಗಿದೆ! ಈ ಸ್ವಯಂಭೂ ಆದಿತ್ಯ (ಲಿಂಗ) ಶಕ್ತಿಯ ಪ್ರಭಾವದ ಮೂಲಕವಾಗಿ ವಿಶ್ವನಿಯಮದಂತೆ ಉಂಟಾಗಬಲ್ಲ ಅಂತರ್–ಬಾಹ್ಯ ಸೂಕ್ಷ್ಮ ಕತ್ತಲಿನಿಂದಾಗಿ ಈ ಬಾಳಿನಲ್ಲಿ ಅರ್ಥ=ಮೌಲ್ಯಗಳೇ ಇಲ್ಲ, ಎಂಬ ಭ್ರಾಂತಿಗೆ ಇಂಬು ದೊರೆತಿದೆ! 'ಜೀವಿತದ' (ಲೈಂಗಿಕ ಹಂತದ) ಭೂಮಿಕೆಯಿಂದ 'ಜೀವನ'ದ (ಪ್ರಜ್ಞೆ) ಪಾತಳಿಯು ಅರ್ಥವಿಹೀನವಾಗುತ್ತದೆ. ಇದರಿಂದಾಗಿ ಅಂತರ್ ವಿಸಂಗತ ಪ್ರೇರಣಾದ್ವಂದ್ವವೇ, ಈ ಮನು–ಜರ ಮನಸ್ಸಿನ ಮೂಲ ಸ್ವಭಾವ ಎಂಬ ಗ್ರಹಿಕೆಯು ಇಂದು ಎಲ್ಲೆಲ್ಲೂ

ಬೆಳೆದು ನಿಂತಿದೆ 'Law of contraries' ಲೋಕವನ್ನು ಆಳುತ್ತದೆ ಎಂದು ಪ್ಯಾಥ್ಯಾಗೋರಾಸ ಪಂಥವು ನಂಬಿಸಿದೆ. ಹೆಗೆಲ್ಲನೂ ಇದಕ್ಕೆ ಮಾರು ಹೋಗಿದ್ದಾನೆ! ಆದರೆ ಮಹಾಮಾನವ ಐನ್‌ಸ್ಟೆನ್ ಇವರ ವಿಶ್ವನಿಯಮ ಬಗೆಗಿನ ನಿಷ್ಠೆ, ವೈವಸ್ವತ ಮನು ಸಂಪ್ರದಾಯದ ಮೂಲ ನಿಷ್ಠೆಯನ್ನು ನೆನಪಿಗೆ ತಂದುಕೊಡುತ್ತಿದೆ.

"The hormony and consistancy of mental constructions is an indication of their objective nature their agreement with objective reality."

The world is well ordered integrated entity."(P-55)

ಐನ್‌ಸ್ಟನ್ನರ ಈ ನಿಷ್ಠೆಯೊಳಗಿನ, ಈ ಜೀವನವು "intigrated entity" ಇದೆ, ಎಂಬ ಈ ಮಾತು, ತುಂಬ ಮಾರ್ಮಿಕವಿದೆ. 'ಮಾನವ ಧರ್ಮ' ದಲ್ಲಿ ಆಗಿರುವ ಅಸಾಂಗತ್ಯದ ಮೇಲೆಯೇ ಇಲ್ಲಿ ಬೆರಲಿಟ್ಟಂತಾಗಿದೆ.

ಈ ಬಾಳಿನಲ್ಲಿ 'ಜಾತವೇದ ಅಗ್ನಿ' (ಪ್ರಜ್ಞೆ: ಮನು–ಜ) ಮತ್ತು 'ನ-ಚಿಕೇತ ಅಗ್ನಿ' (ಬುದ್ಧಿ=ನರ(ಳ)ತ್ವ) ಇವೆರಡರಲ್ಲಿ ಸಾಂಗತ್ಯವಿರಬೇಕು. ಇವು 'integrated' ಇದ್ದರೇ ಈ ಮಾನವ ಜೀವನವು ಒಂದು 'entity' (real existance) ವಾಸ್ತವ: ಸತ್ಯ ಸ್ವರೂಪದ್ದು ಆಗಬಲ್ಲುದು.

ಈ ಸಾಂಗತ್ಯವು (integration) ಯಾವ ಬಗೆಯದು ಇರಬಲ್ಲುದು? ಜಾತ ವೇದನಿಗೆ (ಪ್ರಜ್ಞೆಗೆ–ಮನುಜನಿಗೆ) ನ-ಚಿಕೇತ ಅಗ್ನಿ (ಬುದ್ಧಿ, ಲೈಂಗಿಕ ಪ್ರವೃತ್ತಿ) ಇದು ಅಂಕಿತವಿರಬೇಕೆ? ಅಥವಾ ನಚಿಕೇತಾಗ್ನಿ (ಯೋನಿ–ಲಿಂಗದ=ನಳನ) ಪ್ರಚೋದನೆಗೆ, ಜಾತವೇದನು (ಮನು–ಜನು) ಅಂಕಿತನಿರಬೇಕೆ? ಅಥವಾ ಇದನ್ನು ಇನ್ನೊಂದು ಬಗೆಯಿಂದ ಹೇಳಬಹುದು. ಭಾವಾತ್ಮಕ, ಅನು–ಭವಾತ್ಮಕ, ಅಭಿಜಾತ ಇದಕ್ಕೆ ಜೀವಿತ ಅ–ಭಾವಾತ್ಮಕ, (ಅನುಭವಕ್ಕೆ ನಿಲುಕದ=ಕಾಲ್ಪನಿಕ ಕೃತಕ) ಇದು ಅನುಸರಿಸಬೇಕೆ? ಅಥವಾ ಜೀವಿತ (ಅಭಾವಾತ್ಮಕ=ಕತ್ತಲು) ಇದಕ್ಕೆ ಜೀವನ (ಭಾವಾತ್ಮಕ ಪ್ರಕಾಶ ರೂಪ) ಇದು ಅನುಸರಿಸಬೇಕೆ?

'ಭಗ'–ವತ್ ಗೀತೆಯಲ್ಲಿ ಇದರ ಎರಡನೆಯ ಬಗೆಯು ಚಿತ್ರಿತವಿದೆ! ಕೃಷ್ಣ=ಕತ್ತಲೆ=ಜೀವಿತ (ಆದಿತ್ಯ=ಲಿಂಗರೇತ—ಶಕ್ತಿ) ಎಂಬ ಶಕ್ತಿ

ಯುನ್ನು, ಅರ್ಜುನನು=ಪ್ರಕಾಶ ಜೀವನ (ಮನು ವೈವಸ್ವತನು) ಅನುಸರಿಸುತ್ತಿದ್ದಾನೆ!

ಭಾವಾತ್ಮಕ ಜೀವನ ಸಂಗೀತದಲ್ಲಿ 'ಹುಸಿ' ತಾಳ ಸ್ವರೂಪ, ಅಭಾವಾತ್ಮಕ ಜೀವಿತಕ್ಕೂ ಒಂದು ಪರಿಮಿತ ಸ್ಥಾನವು ಉಂಟೇ ಉಂಟು. ಆದರೆ 'ಹುಸಿತಾಳ ಸ್ವರೂಪ, ಅಭಾವವೇ ಸ್ಥಾಯಿೂ ಇರುವ ಕೃಷ್ಣ (ವಿಷ್ಣು, ರುದ್ರ, ಆದಿತ್ಯ, ಗಣಪತಿ=ಬ್ರಹ್ಮಣಸ್ಪತಿ=ಚರಲಿಂಗ) ಶಕ್ತಿಗೇ ಅಗ್ರಪಟ್ಟವು ದೊರೆವಾಗ ಬಾಳಿನಲ್ಲಿ ಭ್ರಷ್ಟಾಚಾರ, ಅನಾಚಾರಾದಿ ಅನಿಷ್ಟ ಪ್ರವೃತ್ತಿಗಳಿಗೆ ಆಮಂತ್ರಣವು ದೊರೆಯದೇ ಇದ್ದರೆ ಸೋಜಿಗ! ರಾತ್ರ್ಯ್ರಗವೋ ಪ್ರಲೀಯುಂತೇ ಎಂದು ಈ 'ಭಗ'-ವಂತನೇ ಆಡಿದ್ದು ಉಂಟು ! ಈ ಕಾರಣದಿಂದಾಗಿ ಗೋರ್ಜಿಯಾಸನು ಹೇಳಿರುವ 'Justifiable deception' (ಮಂಡನವು ಶಕ್ಯವಿರುವ ಹಾಗಿನ ಮೋಸ ತರುವ) ಗ್ರಂಥಗಳಲ್ಲಿ ಜಾಗತಿಕ ಮಟ್ಟದಲ್ಲಿಯೇ ಗೀತೆಗೆ ಅನನ್ಯ ಸ್ಥಾನವು ಇದೆ!

II

ಈ ಸಾಂಸ್ಕೃತಿಕ ಸತ್ಯಾನ್ವೇಷಣೆಯೊಳಗಿನ ಎರಡನೆಯ ಘಟ್ಟವು ಇಲ್ಲಿ ಪ್ರಾರಂಭವಾಗುತ್ತದೆ. 'ಹಾಲುಮತದರ್ಶನ'ದಿಂದ ತೊಡಗಿ (೧೯೬೦), 'ಪ್ರವಾಹ ಪತಿತರ ಕರ್ಮ' ಕಣ್ಣಳತೆಯಲ್ಲಿ ಬರುವ ವರೆಗಿನ ಅವಧಿಯಲ್ಲಿ (೧೯೭೫), ನರ(ಳ) ಸಂಪ್ರದಾಯದ ಆಪಃ, ರಸಃ ರೇತ ತತ್ವದ ಭೂಮಿಕೆ ಯಿಂದ ಪ್ರಚೋದಿತ ನಾನಾ ದೈವತಗಳ ಶಿಲ್ಪದ ರಹಸ್ಯವನ್ನು ಗ್ರಹಿಸಿಕೊಳ್ಳುವ ಪ್ರಯತ್ನಕ್ಕೆ ಪ್ರಾಶಸ್ತ್ಯವಿತ್ತು.

'ಹಿಂದೂ' ಎಂಬ ಹೆಸರಿನ ಹಿಂದೆ ಅಡಗಿ ಕಣ್ಣುತಪ್ಪಿಸಿಕೊಳ್ಳು ತ್ತಿದ್ದ 'ಸ್ವಯಂ-ಭೂ' 'ಮನು' ಮೊಗವಾಡದ ನರ(ಳ) ಸಂಪ್ರ ದಾಯವು, ಬೆಂಗಳೂರ ವಿಶ್ವವಿದ್ಯಾಲಯದ ಉಪನ್ಯಾಸದ ಸಂದರ್ಭದಿಂದ ಬಯಲಿಗೆ ಬಂತು ! ಈ ಸ್ವಯಂಭು 'ವೈವಸ್ವತ'ನನ್ನು ಮೆಟ್ಟಿ ನಿಲ್ಲಲು ಮಾಡಿ ರುವ ಮಂತ್ರ, ತಂತ್ರ, ಮಾಟ-ಮೋಸ ಅರಿಕೆಗೆ ಬಂತು ! 'ನಿಜವಾದ' 'ಮನು'ವು ಎಂದರೆ ಇವನು ವಿವಸ್ವನ್> 'ವೈವಸ್ವತನೇ ಸರಿ' ಎಂಬುದು ಖಚಿತವಾಯ್ತು ! ಆದರೆ ಈ 'ವೈವಸ್ವತ' ಮನು>ಮಾನವ ಧರ್ಮದ ಸಾಂಸ್ಕೃತಿಕ ಕಟ್ಟಡದ ಆಕೃತಿಯು ಗಮನಕ್ಕೆ ಬಾರದಾಗಿತ್ತು.

ಈ ಅನ್ವೇಷಣೆಯಲ್ಲಿ ನಿಜವಾದ 'ಧರ್ಮ' ಎಂಬುದು ವಿಶ್ವನಿಯಮಕ್ಕೆ ಸುಸಂಗತವೇ ಇರಬಲ್ಲುದು; ಇದು ವಿಶ್ವನಿಯಮದ ಆಧಾರದ ಮೇಲೆ ನಿಂತಿದೆ. ಎಂಬುದು ಸ್ಪಷ್ಟತೆಯನ್ನು ಪಡೆಯತೊಡಗಿ, 'ವೈವಸ್ವತ ಮನು ಪ್ರಣೀತ ಮಾನವ ಧರ್ಮದ ಆಕೃತಿ'ಯನ್ನು ಬರೆಯುವುದು ಶಕ್ಯವಾಯಿತು (೧೯೭೯).

ಇಂದಿನ ಸ್ವಯಂಭೂ ನರ(ಳ) ಸಂಪ್ರದಾಯಗಳು 'ಮನು' ಜತ್ವವು ಲಭಿಸುವದಕ್ಕೂ ಮುಂಚಿನ ಹಂತದ 'ಅಸು' ಪೂಜಕ ಅಸುರ ವರ್ಗದ ಪುರಾತನರು ರೂಢಿಸಿರುವ ಆತ್ಮಲಿಂಗೋಪಾಸಕ ಸಂಥಗಳ ಉತ್ತರಾಧಿಕಾರಿ ಆಗಿವೆ, ಇದರಲ್ಲಿ ಎಳ್ಳನಿತೂ ಸಂದೇಹವಿಲ್ಲ. ಏಕೆಂದರೆ—

ಡಾರ್ವಿನ್ನನನ್ನು ಆಕ್ಷೇಪಿಸಿದ ವ್ಯಾಲ್ಲಾಸನು ಸೂಚಿಸಿರುವ ಲಕ್ಷಣಗಳು, ಈ ಸಂಪ್ರದಾಯದ ನಡೆವಳಿ ನುಡಿವಳಿಯಲ್ಲಿ ಎದ್ದು ಕಾಣುತ್ತಿವೆ.

I) ಪ್ರಾಣ ದೇವರು ಎಂಬ ಹೆಸರಿನಲ್ಲಿ 'ವಾನರ'ನನ್ನು ಪೂಜಿಸುವಲ್ಲಿ Nostalgia (ಪೂರ್ವ ಸ್ವಭಾವವು) ಎದ್ದು ಕಾಣುತ್ತಿದೆ. 'ಮನಸ್ಸಿನ' 'ಪ್ರಾದುರ್ಭಾವಕ್ಕೂ ಮುಂಚಿನ ಹಂತವು ಇದು. II) ಮತ್ತು ಮಾನವ ಭಾಷೆಗೂ ಮುಂಚಿನ ಅವಸ್ಥೆಯು ಇಲ್ಲಿ ಇರಬೇಕು. ಇವೆರಡೇ ಅಂಶಗಳನ್ನು ಲೆಕ್ಕಿಸಿದರೂ ಸಾಕು ಈ ನರ(ಳ) ಸಂಪ್ರದಾಯಗಳು, ಪಾಶ್ಚಾತ್ಯ, ತಜ್ಞರು ಹೇಳುವ Cultural 'missing link' ಆಗಿರುವದನ್ನು ಮನಗಾಣಬಹುದಾಗಿದೆ.

ಪ್ರಜ್ಞೆಯ ಅಂಗವಾದ ಮನಸ್ಸನ್ನು ಶೂನ್ಯಗೊಳಿಸಿ, ಚಿದ್ವಿಲಾಸದ ತಾತ್ತ್ವಿಕ ಭೂಮಿಕೆಯನ್ನು, ಈ ಸಂಪ್ರದಾಯಗಳು ಸ್ವೀಕರಿಸಿವೆ. ಚಿತ್ ಶಕ್ತಿಯ ಉಪಾಸಕ ಶೌಪೆನ್‌ಹೌಅರನು ಪ್ರಪಂಚವನ್ನು 'The World as Will and ideas' (1818) ಯಾವ ದೃಷ್ಟಿಯಿಂದ ಕಾಣುತ್ತಿದ್ದನು ಎಂಬುದಕ್ಕೆ ಆತನ ಈ ಗ್ರಂಥವೇ ಸಾಕ್ಷಿ. ಚಿತ್‌ಶಕ್ತಿಯಲ್ಲಿ ನಿಷ್ಠೆಯಿದ್ದ ಶೌಪೆನ್ ಹೌಅರನಿಗೆ 'ಉಪನಿಷತ್ತು'ಗಳನ್ನೋದಿ ಪರಮಾನಂದವಾಯ್ತು ಎಂಬುದು ಸುವಿಖ್ಯಾತವಿದೆ. ಇಲ್ಲಿ ಈ ಮಾತು ಯಾತಕ್ಕೆ ಎಂದರೆ, ಚಿತ್ತದ ಉಪಾಸನೆಗೆ ಪ್ರೇರಿಸುವ ನಮ್ಮ (ವೇದ) ಉಪನಿಷತ್ತುಗಳು, 'ಸರ್ವೋಪನಿಷತ್ತುಗಳ ಸಾರ', ಎಂಬ ಗೀತೆ ಇತ್ಯಾದಿಗಳು ಭಾರತೀಯ ಪೂರ್ವ ಪರಂಪರೆಯೊಳಗೆ 'ವೈವಸ್ವತ

ಮನು' ಸಂಪ್ರದಾಯವು ಹಿಮ್ಮೆಟ್ಟಲು ಕಾರಣವು ಏನು ಎಂಬುದನ್ನು ನಿದರ್ಶನಕ್ಕೆ ತರುವ ಪ್ರಮಾಣಗಳಾಗಿವೆ.

ನರ (ಳ) ಸಂಪ್ರದಾಯಗಳು ಪ್ರಜ್ಞೆ—ಮನಸ್ಸು ಇದನ್ನು ಬೆಲೆಗೇಡಾಗಿಸಿವೆ; ವ್ಯಾಲ್ಲಾಸನು ಹೇಳಿದಂತೆ ನರಸಂಪ್ರದಾಯ 'missing link' ಇದು ಮನಸ್ಸಿನ ಪ್ರಾದುರ್ಭಾವಕ್ಕೂ ಮುಂಚಿನ ಹಂತದ ಸೂಚಕವೇ ಆಗಿದೆ. ವ್ಯಾಲ್ಲಾಸ ಹೇಳಿರುವ ಇನ್ನೊಂದು ಲಕ್ಷಣ, ಮಾನವ ಭಾಷಾಪೂರ್ವ ಹಂತವು ಇದು.

iii) ಈ ಅಂಶವನ್ನು ಇದಕ್ಕೂ ಮುಂಚಿನ ಪ್ರಕಟನೆಗಳಲ್ಲಿ ಸ್ಪಷ್ಟೀಕರಿಸಿದ್ದಾಗಿದೆ. 'ಪ್ರಜ್ಞೆಯು ಜಾಗೃತವಿರುವಾಗಿನ ಭಾಷೆ'ಯ ಬಗೆಗೆ, ಈ ದಿವ್ಯಾಧ್ಯಾತ್ಮಗಳಲ್ಲಿ ಅಸಡ್ಡೆ<ಅಶ್ರದ್ಧೆ ಇದೆ! 'ಮೈಯಲ್ಲಿ ಆವೇಶವಾಗಿ, ಹೊರಹೊಮ್ಮುವ ಮಾತು, ಭಾಷೆ ವಿಶ್ವಾಸಾರ್ಹವಂತೆ !

ಈ ವೇದದ 'ಆಂಭೃಣೀ' ಸೂಕ್ತವು (x—೧೨೫) ಇದು ಒಬ್ಬ ಷೋಡಶೀ ಕು—ಮಾರಿಯ ಮೈಯಲ್ಲಿ 'ಆವೇಶ'ವಾದಾಗ ಹೊರಹೊಮ್ಮಿ ಬಂದಿರುವ ಮಂತ್ರ ಪಾಠ, ಎಂದು ನಂಬಿಸಲಾಗಿದೆ. ಆದರೆ ಮೈಯಲ್ಲಿ ಆವೇಶವಾಗಿ, ಭಾವಾವಿಷ್ಟ ಅವಸ್ಥೆಯಲ್ಲಿ, ರಾಮಕೃಷ್ಣ ಪರಮಹಂಸರಂತಹರ ಬಾಯಿಂದ ಅಸ್ಫುಟ, ಅಸ್ಪಷ್ಟ ಮಾತು ಹೆಚ್ಚಾದರೆ ಕೆಲ ಶಬ್ದಗಳು ಹೊರ ಬರುತ್ತಿದ್ದವು. ಎಂದು ಪ್ರತ್ಯಕ್ಷದರ್ಶಿಗಳು ಬರೆದಿಟ್ಟಿದ್ದಾರೆ. ಮೈಲಾರ ದೇವರ ಪ್ರತಿ ವಾರ್ಷಿಕ 'ಕಾರಣಿಕ'ದ ಕಾಲಕ್ಕೆ 'ಆವೇಶ'ವಾಗಿ ಹೊರಬರುವ ಮಾತುಗಳ ಸಂದಿಗ್ಧತೆಯೂ ಸುವಿಖ್ಯಾತವಿದೆ.

ಹೀಗೆ, ಇದು ನಿಜಸ್ಥಿತಿ ಇರುವಾಗ ವೇದದಲ್ಲಿ ಇರುವ 'ಆಂಭೃಣೀ' ಸೂಕ್ತದಂತಹ ಉದ್ದೇಶ ಪೂರ್ವವಾಗಿ ರಚಿತ ಕವನವನ್ನು 'Revelation' ಎಂದು ಬಗೆಯಲಾಗುತ್ತಿರುವಲ್ಲಿ ಆತ್ಮವಂಚನೆ, ಪರವಂಚನೆ ಎರಡೂ ದೋಷಗಳಿಗೂ ಅವಕಾಶವು ಉಂಟು.

ಈ ಭಾಷೆಯ ವಾಸ್ತವ ಸ್ವರೂಪವನ್ನು ಬಯಲಿಗೆ ತರಬಲ್ಲ ನಿರ್ದೇಶವು ಒಂದು ಬೃಹದಾರಣ್ಯಕದಲ್ಲಿ ಇದೆ (ಪ್ರಾಣಾಃ ವಾ ಋಷಯಃ)! 'ಪ್ರಾಣ (ಲಿಂಗ) ಶಕ್ತಿಯ ಆವೇಶವು' ಋಷಿತ್ವಕ್ಕೆ ಕಾರಣ, ಎಂಬ ಈ ನಂಬುಗೆಯಂತೆ, ಜ್ಞಾನೇಶ್ವರನು, 'ಕೋಣನ ಬಾಯಿಂದ ವೇದ ನುಡಿಸಿದನು' ಎಂಬ ಪವಾಡವು

ವಿಶ್ವಾಸಾರ್ಹವಾಗುತ್ತದೆ. ಫಕ್ಕ ಲೊಟಗುಡುವ ಹಲ್ಲಿಗೆ 'ಆಗಾಮಿ ಸಂಗತಿ ಸೂಚಕ ಅಂತರ್ ಜ್ಞಾನವಿರುತ್ತದೆ' ಎಂಬ ನಂಬುಗೆಯೂ ಸಾಧುವಾಗುತ್ತದೆ. ಮೇಲಣ ಹಿನ್ನೆಲೆಯಲ್ಲಿ !

III

'ಪ್ರಾಣಾ ಃ ವಾ ಋಷಯಃ' ಪ್ರಾಣ=ನಚಿಕೇತ ಅಗ್ನಿ ಇದುವೆ ಮನುಜರ ಮಾರ್ಗದರ್ಶಕ ತತ್ತ್ವವು ಆಗುವದರಿಂದ, ಈ ಮಾನವನು ನರ(ನ)ನ ಹಂತಕ್ಕೆ ಬರುವುದರೊಡನೆ, ಇವನ ಗುಣ–ಸ್ವಭಾವದಲ್ಲಿ, ಅನಿವಾರ್ಯವಾಗಿ ಆಗಲೇಬೇಕಾದ ಸ್ಥಿತ್ಯಂತರಗಳ ಸಮೀಕ್ಷೆಯ ಒಂದು ಅಂಶವು ಈ ಪ್ರಬಂಧದ ವಿಷಯವಾಗಿದೆ.

ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ, ಪಾಶ್ಚಾತ್ಯ ಪರಂಪರೆಯಂತೆ 'Reason' :- 'Intellect' ಎಂಬ ಈ ಅಮೂರ್ತ ವಿಚಾರಕ್ಕೆ ಪ್ರಾಶಸ್ತ್ಯವು ಪ್ರಾಪ್ತವಾಗಲಿಲ್ಲ ! 'Sovereignty of Reason' ಎಂಬ ಪಡೆಮಾತು ಪಾಶ್ಚಾತ್ಯರಲ್ಲಿ ಶಿಷ್ಟಮಾನ್ಯವಾಗುತ್ತದೆ. ಆದರೆ ಭಾರತೀಯ ಪೂರ್ವ ಪರಂಪರೆಯಲ್ಲಿ ಬುದ್ಧಿ=ಮೇಧಾಶಕ್ತಿಯನ್ನು ಪ್ರತಿನಿಧಿಸುವ ನಾನಾ ಆಕಾರ ರೂಪದ ದೈವತಗಳು, ಕಾಲಕಾಲಕ್ಕೆ ಪ್ರಚಾರಕ್ಕೆಬಂದಿವೆ. 'ಋಗ್ವೇದಸ್ಥ ಎರಡು 'ವಾಕ್' ಸ್ವರೂಪದ ವಿಚಾರವು ಮೊದಲಲ್ಲಿ ಗಮನ ಸೆಳೆದಿತ್ತು. (ಸವಿ ನೆನಪು; ೧೯೭೦; ಪು ೭೦೬–೧೫). ಈ ಅಭಿನಂದನ ಗ್ರಂಥದಲ್ಲಿ ಬಂದ ಲೇಖವು ೪/೬ ವರುಷ ಮುಂಚಿನದು. ಅಂದು ವಾಕ್ ಮತ್ತು ಗೀರ್ವಾಣ-ವಾಣಿ ಇವೆರಡರೊಳಗಿನ ಅಂತರವು ಹೊಳೆದಿರಲಿಲ್ಲ. ಆದರೆ, ಶ್ರೀಮತಿ ಭಾರತಿಯವರ ಅಭಿನಂದನ ಗ್ರಂಥಕ್ಕೆ 'ಸವಿತೃ' ವನ್ನು ಕುರಿತೇ ಬರೆದದ್ದಾಯ್ತು (೧೯೭೧).

ಸವಿತೃವೂ, ವೈವಸ್ವತನಂತೆ 'ಆದಿತ್ಯ'ನಾಗಿ ಮಾರ್ಪಟ್ಟದ್ದು ಕಂಡಾಗ, ಈ 'ಆದಿತ್ಯ'–'ಅದಿತಿ'–(ಲಿಂಗ–ಯೋನಿ) ಸಂಪ್ರದಾಯದ ಬೇರುಗಳನ್ನು ಕಂಡು ಹಿಡಿಯುವ ಮನೀಷೆ ತೀವ್ರವಾಯ್ತು ! ಬಳಿಕ 'ನಾಗಪ್ರತಿಮಾ' ವಿಚಾರವು ಅನ್ವೇಷಣೆಯ ವಿಷಯವಾಯ್ತು. ಈ ನಾಗ (ಉಭಯಲಿಂಗೀ ಲಿಂಗ) ಶಕ್ತಿಯೇ 'ಬುದ್ಧಿ' ದೇವರು ಎಂದು ಪೂಜೆಗೊಳ್ಳುತ್ತಿರುವಲ್ಲಿ ಎರಡು ಸಂಗತಿಗಳ ಸ್ಪಷ್ಟೀಕರಣವು ದೊರೆಯುತ್ತದೆ. ೧) ಪ್ರಜ್ಞಾ ಃ ಮತಿ=ಮನು ವೈವಸ್ವತನನ್ನು ಪೂರ್ಣ ಮರೆತದ್ದು. ಭಾರತೀಯರು 'ಸ್ಥಿತಪ್ರಜ್ಞರು'=ಸ್ಥಗಿತ ಪ್ರಜ್ಞ

ರಾಮಪದಕ್ಕೆ 'ಬುದ್ಧಿ' ಶಕ್ತಿಯನ್ನು ಪ್ರತಿನಿಧಿಸುತ್ತಿರುವ ದೈವತೆಗಳೇ ಸಾಕ್ಷಿ.

ಅ) ಅಶ್ವ-ತ್ಥ = ಪುರುಷ ಪುರೀ–ಶಯ(ನ) ಗುಹೆಯ ಈಶರೂಪ–ವೃಕ್ಷದ ಉಪಾಸನೆ, ಬ್ರಾಹ್ಮಣ–ಬ್ರುವರ ವರ್ಗದಲ್ಲಿ! 'ಸೂರ್ಯ ನಮಸ್ಕಾರ'ದ ಧ್ಯಾನ ಮಂತ್ರ, 'ಅಶ್ವತ್ಥ' ಪೂಜೆ–ಸಮೀಕ್ಷಿಸಿರಿ.

ಬೌದ್ಧರ ಬೋಧಿವೃಕ್ಷ ಪೂಜೆ ಕ್ರೈಸ್ತ–ಹಿಬ್ರುಗಳಲ್ಲಿ ಜ್ಞಾನವೃಕ್ಷದ ಫಲ ತಿಂದ ಕಥೆ! ಇವು ಮನನೀಯವಾಗಿವೆ.

ಆ) ಮರುತ > ಮಾರುತಿ ಜ್ಞಾನಮೂರ್ತಿ ವ್ಯಾಕರಣಕಾರ, ಇತ್ಯಾದಿ ಗ್ರಹಿಕೆ! ವೇದದಲ್ಲಿ ಅಹಿ–ಭಾನವಃ ಎಂದು ಈ ಮರುತರು ವರ್ಣಿತರಾಗಿದ್ದಾರೆ. ಕೇನೋಪನಿಷತ್ತಿನಲ್ಲಿ ಜ್ಞಾನದೇವಿ ಯಕ್ಷಿ= ಉಮಾ ಹೈಮವತಿ ವೇದದ ಸರಸ್ವತೀ, ಭಾರತಿ, ಆಂಭೃಣಿಯರ ಮಿಂಡರೆಂಬ ಬೃಹಲ್ಲಾಂಗಲ ರುದ್ರಿಯ–ಮರುತರು; ಇವರು 'ಬುದ್ಧಿದೇವಿಯ ಗಂಡರಲ್ಲವೆ?'

ಇ) ರುದ್ರಿಯ 'ಗಣ(ದ)ಪತಿ', ದ್ವೀಜಿಹ್ವನೇ ಎಂಬುದನ್ನು ಸೂಚಿಸುವ, ವಿಘ್ನಹರ್ತ ಮತ್ತು ವಿಘ್ನಕರ್ತ ಎಂಬ ಅಂತರ್ ವಿಸಂಗತ ವಿಶೇಷಣಗಳೇ ಸಾಕ್ಷಿ.

ಗಣಪತಿಯಲ್ಲಿ 'ಉಚ್ಛಿಷ್ಟ' ಗಣಪತಿ ಎಂಬ ಸಿದ್ಧಿದಾಯಕ ದೈವತ ಪ್ರತಿಮಾ ವಿವರಣೆ, ಟಿ. ಗೋಪಿನಾಥರಾಯರ 'ಮೂರ್ತಿ ಶಾಸ್ತ್ರ'ದಲ್ಲಿ ನೋಡಿ ಕೊಳ್ಳಿ 'ಅಶ್ಲೀಲ' ವೆನಿಸದೇ ಇರದು. ಆದಕಾರಣ ವರ್ಣನೆ ಬೇಡ.

ಈ) 'ಗಣ–ಪತಿ'ಯ ಸ್ವರೂಪ ಗೊತ್ತಾಗಲು, 'ಸ್ಕಂದ' ಇವನ ಅಣ್ಣನ ನಿಜ ಸ್ವರೂಪವನ್ನು ಅರಿಯಬೇಕು. ಛಾಂದೋಗ್ಯದಲ್ಲಿ 'ಸನತ್‌ಕುಮಾರ' ಎಂಬ (ಡಾ. ರಾಧಾಕೃಷ್ಣರು ಹೇಳಿರುವ ಜ್ಞಾನಮೂರ್ತಿ ಅಲೌಕಿಕ 'ಗುರು ಮೂರ್ತಿ'. ಈತನಲ್ಲಿಗೆ ನಾರದ (ನಾರ= ನೀರು ಬೇಡಿದವರಿಗೆ ದಾನಮಾಡುವ ಪರೋಪಕಾರೀ ಹುಟ್ಟುಗುಣದ) ಬಂದಿದ್ದಾನೆ!

ಇನ್ನು ಈ ವಿವರ ಬೆಳೆಸುವ ಅವಶ್ಯಕತೆಯು ಕಾಣದು (ವೈವಸ್ವತ ಪ್ರ. ಪು. ೧೫೫–೧೬೪). ಬುದ್ಧಿಗೆ ಪ್ರೇರಿಸುವ ಶಕ್ತಿ ತತ್ತ್ವ ರೇತ=ಶುಕ್ರ ಇದೇ ಅಲ್ಲವೆ? ಪಾಣಿನಿಯ ಕಾಲದಲ್ಲಿ 'ಆದಿತ್ಯ ವ್ರತ' ವು ಪ್ರಚಲಿತವಿತ್ತೆಂದು (ಅಗ್ರವಾಲಾ) ಬಯಲಿಗೆ ಬಂದಿದೆ.

ಆದಿತ್ಯನು= 'ಆಪೋ ಜ್ಯೋತಿ' ಸ್ವರೂಪನು. ಸೂರ್ಯನಾರಾಯಣ

ಎಂಬಲ್ಲಿ ಈ ಜ್ಞಾನ ಸೂರ್ಯನು 'ನಾರ–ಆಯನ' = ಲಿಂಗ ರೇತದ ಹೊಂಡ ಸೂರ್ಯ ಆಗಿಲ್ಲವೆ ? ಸೂರ್ಯನಾರಾಯಣೋಪಾಸಕರಾದ ಇಂಥ ಮೇಧಾವಿಗಳ ಸಂತಾನ ಸಂಖ್ಯೆ ಹೆಚ್ಚುತ್ತಲೇ ಹೊರಟಿರುವಲ್ಲಿ ಅಂತಃಸಂಗತಿಯಿದೆ.

'ಸೂರ್ಯನಾರಾಯಣ' ಎಂದರೂ ಜ್ಞಾತಾಜ್ಞಾತವಾಗಿ ಸೂರ್ಯ (ವೈವಸ್ವತ, ಸವಿತೃ) ದೇವನ ಪ್ರಭಾವದ ಅಂಶ ಎಂತೋ ಉಳಿದು ಜಾಗತಿಕ ಮಟ್ಟದಲ್ಲಿ ಭಾರತೀಯ ತರುಣರು ಪ್ರತಿಭಾಶಾಲಿಗಳೂ, ನವ ನವೋನ್ಮೇಷಶಾಲಿಗಳು ಇದ್ದದ್ದು ಆಗೀಗ ಕೇಳಿ ಬರುತ್ತದೆ.

೨) ಈ ಉಪಾಸನೆಯ ಇನ್ನೊಂದು ಪರಿಣಾಮ ಎಂದರೆ, ಗ್ರೀಕ ಸಂಸ್ಕೃತಿಯ ಅಧಃ ಪಾತದ ಬಗೆಗೆ ಗಿಲ್ಬರ್ಟ ಮರ್ರೆ ಹೇಳಿರುವ ಮಾತು Failure of Nerves !

ಬುದ್ಧಿ, ಪ್ರಜ್ಞೆಗಿಂತ ಭಿನ್ನ. ವೈಯಕ್ತಿಕ ದೃಷ್ಟಿಕೋನವನ್ನು ಪ್ರಚೋದಿಸುವ ಶಕ್ತಿ. ಆದಕಾರಣ ಸಮಾಜದಲ್ಲಿ ಎಷ್ಟು ಮೇಧಾವೀ ಬುದ್ಧಿವಾದಿಗಳು, ಬುದ್ಧಿ ಜೀವಿಗಳೋ ಅಷ್ಟು ಅವರವರ ಒಂದೊಂದು ಪಕ್ಷವಾಗುತ್ತದೆ.

ಭಾರತೀಯ ಪೂರ್ವ ಪರಂಪರೆಯಲ್ಲಿ 'ಪ್ರಜ್ಞಾ' 'ಬುದ್ಧಿ' ಇಂತಹ ಮಹತ್ವದ ಪಾರಿಭಾಷಿಕ ಪದಗಳ ಸ್ಪಷ್ಟೀಕರಣವೂ, ಎಂತೋ ಉಳಿದು ಬಂದಿರುವ ಸೋಜಿಗವನ್ನು ಕಾಣಬಹುದು. ಕಾಶ್ಮೀರ ವಿಖ್ಯಾತ ಪಂಡಿತ ಅಭಿನವ ಗುಪ್ತನು ಭಟ್ಟ ತೌತನಿಂದ ಎತ್ತಿ ಹೇಳಿರುವ ಶ್ಲೋಕವು ಇದು:

ಸ್ಮೃತಿ : ವ್ಯತೀತ ವಿಷಯಾ, ಮತಿ ಃ ಆಗಾಮಿ ಗೋಚರಾ !
ಬುದ್ಧಿ : ತಾತ್ಕಾಲಿಕೀ ಜ್ಞೇಯಾ, ಪ್ರಜ್ಞಾ ತ್ರೈಕಾಲಿಕೀ ಮತಾ
ಪ್ರಜ್ಞಾಂ ನವನವೋನ್ಮೇಷ ಶಾಲಿನೀಂ ಪ್ರತಿಭಾಂ ವಿಧು ಃ

ಈ ಅಪೂರ್ವ ಶ್ಲೋಕವನ್ನು ಒದಗಿಸಿ ಕೊಟ್ಟವರು ಡಾ. ಕೆ. ಕೃಷ್ಣಮೂರ್ತಿ ಅವರು. ಆಕಸ್ಮಿಕ ಭೆಟ್ಟಿಯ ಸಂದರ್ಭದಲ್ಲಿ, ನಾನು ಬರೆಯುತ್ತಿರುವ ಈ ಪ್ರಬಂಧದ ಪರಿಚಯ ಮಾಡಿಕೊಟ್ಟೆ. ಆಗ ಉತ್‌ಸ್ಫೂರ್ತಿಯಿಂದ ಈ ಶ್ಲೋಕ ಎತ್ತಿ ಹೇಳಿ ನನ್ನ ವ್ಯಾಸಂಗಕ್ಕೆ ನೆರವಾದದ್ದಕ್ಕಾಗಿ ನಾನು ಅವರಿಗೆ ಕೃತಜ್ಞ.

ಈ ಶ್ಲೋಕದಲ್ಲಿ 'ಸ್ಮೃತಿ'ಮತಿ 'ಮನ ಃ.ಶಕ್ತಿಯ ಮೂಲ ಸಾಮರ್ಥ್ಯ' ಮತ್ತು 'ಬುದ್ಧಿ' ಈ ಪದಗಳಲ್ಲಿ ಅಭಿಪ್ರೇತವಿರುವ ಪರಂಪರಾಗತ ಆಶಯದ

ಸೂಚನೆಯು ಇಲ್ಲಿ ಇದೆ.

'ಸ್ಮೃತಿ'ಯೊಡನೆ ತತ್ಪೂರ್ವದಲ್ಲಿ ಸಂಭವಿಸಿದ ಆಗು–ಹೋಗುಗಳ ವಿಷಯದ ಆಧಾರ ಭೂತ ಸಮಯವು ಅರಿಕೆಗೆ ಬರುತ್ತದೆ.

ಗ್ರೀಕ್ ಪುರಾತನರಲ್ಲಿ ಅನ್ಯಾಕ್ಸಾಗೋರಾಸನು Nous-mind = ಪ್ರಜ್ಞೆ ಮನಃಶಕ್ತಿ ಇದರ ಹಿರಿಮೆಯನ್ನು ನಿಃಸಂದಿಗ್ಧ ರೀತಿಯಲ್ಲಿ ಹೇಳಿದ್ದಾನೆ. 'mind mixed with nothing; finest purest of all things it posseses complete knowledge of things and the greatest strength' (ಪ್ರ. ೫೯)

ಭಾರತೀಯ ಪೂರ್ವ ಪರಂಪರೆಯಲ್ಲಿಯೂ 'ವೈವಸ್ವತ ಮನು'ವಿನ ಮೂಲಕ ದೊರೆವ ಪ್ರೇರಣೆಯ ಸಾಮರ್ಥ್ಯವು ಅನ್ಯಾಕ್ಸಾಗೋರಾಸನ ವರ್ಣನೆಯನ್ನು ಹೋಲುತ್ತದೆ.

'ವೈಚಾರಿಕ ಆಕೃತಿಗಳು ಸನಾತನ' ಇವೆ, ಎಂಬ ಸಂಗತಿಯು ಇಲ್ಲಿ ದೃಢಪಡುತ್ತಿದೆ. ಮನ್ > ಮನ, ಮನು, ಮತಿ, ಬುದ್ಧಿ, ಪ್ರಜ್ಞೆ ಇವುಗಳ ಆಶಯದ ಆಕೃತಿಯು ಸಾರ್ವಕಾಲಿಕವಿದ್ದುದನ್ನು ಇಲ್ಲಿ ಮನಗಾಣಬಹುದು.

ವಿಶೇಷವಾಗಿ 'ಬುದ್ಧಿ'ಯ ಇತಿಮಿತಿಗಳನ್ನು ಕುರಿತ ಈ ಅನ್ವೇಷಣೆಯಲ್ಲಿ ಅನಿವಾರ್ಯವಾಗುತ್ತಿರುವ ನಿಷ್ಕರ್ಷಕ್ಕೆ ಒರ್ಗಸನ್, ಆಧುನಿಕ ಸಂಶೋಧಕನ ಬೆಂಬಲವು ದೊರೆಯುತ್ತಿರುವಂತೆ, ಭಾರತೀಯ ಪೂರ್ವ ಪರಂಪರೆಯೊಳಗಿನ ವ್ಯಾಖ್ಯೆಯಿಂದಲೂ ಪುಷ್ಟಿ ದೊರೆಯುತ್ತಿದೆ.

ಬುದ್ಧಿಃ ತಾತ್ಕಾಲಿಕೀ ಜ್ಞೇಯಾ

ತುರ್ತು ಪರಿಸ್ಥಿತಿ. ಇಕ್ಕಟ್ಟಿನ ಸನ್ನಿವೇಶದೊಳಗಿಂದ ಹೊರಬೀಳಲು ನೆರವಾಗುವ 'Situational logic' ಇದು 'ಬುದ್ಧಿ' ಎನಿಸುತ್ತ ಬಂದಿದೆ.

## IV

ಪಾಶ್ಚಾತ್ಯ ಪರಂಪರೆಯಲ್ಲಿ Reason Intelligence ಇದಕ್ಕೆ ಅಗ್ರಪಟ್ಟವು ದೊರೆತು ಅಲ್ಲಿಯ ಸಾಮಾಜಿಕ, ಸಾಂಸ್ಕೃತಿಕ ಜೀವನ ರೀತಿಯ ಮೇಲೆ ಆಗಿರುವ ಪರಿಣಾಮಗಳ ಸಮೀಕ್ಷೆಯ ಮೂಲಕ ಮಾನವೇತಿಹಾಸಕ್ಕೆ ದೊರೆತ ಹೊಸ ತಿರುವಿನ ಇಷ್ಟಾನಿಷ್ಟ ಸ್ವರೂಪವು ಬೆಳಕಿನಲ್ಲಿ ಬರಬಹುದಾಗಿದೆ.

ಗ್ರೀಕ್, ರೋಮನ್ ಪೂರ್ವ ಪರಂಪರೆಯೇ ಆಧುನಿಕ ಪಾಶ್ಚಾತ್ಯ

ಸಂಸ್ಕೃತಿಯ ಪ್ರೇರಣಾ ಸ್ಥಾನವಾಗಿದೆ. ಈ ಪರಂಪರೆಯ ಸಮಗ್ರ ಸಮೀಕ್ಷೆಯ ಅರ್ಹತೆ ನನಗೆ ಏನೂ ಇಲ್ಲ; ಆದರೂ ಸ್ಥೂಲ, ಎದ್ದುಕಾಣುವ ಕೇಂದ್ರಸ್ಥ ಕೆಲವು ಸಂಗತಿಗಳ ತೌಲನಿಕ ವಿಮರ್ಶೆಯು, ನನ್ನ ಪ್ರಬಂಧದ ಸಂದರ್ಭದಿಂದ ಅನಿವಾರ್ಯವಾಗುತ್ತಿದೆ.

ಬರ್ಟರಾಂಡ ರಸೆಲ್ಲ ಪ್ರಭೃತಿ ಬುದ್ಧಿವಾದೀ ದೃಷ್ಟಿಕೋನದ ತಜ್ಞರು ಹೇಳುವಂತೆ Reason ಇದುವೇ ದೃಷ್ಟಿಕೋನವಾಗುವಾಗ, ಈ ಬಾಳಿನಲ್ಲಿ ನೈತಿಕ ವಿಚಾರಗಳಿಗೆ, ಜೀವನ ಮೂಲ್ಯಗಳಿಗೆ ನಿಜವಾಗಿ ಸ್ಥಾನವೇ ಇಲ್ಲ. ಆದರೂ ಕಾಂಟನಿಗೆ Noumena—phenomena= ಜೀವನದ ಪಾತಳಿ ಜೀವಿತದ ಪಾತಳಿಯು ಭಿನ್ನವಿದ್ದದ್ದು ಅರಿಕೆಗೆ ಬಂತು. ಇದರ ಶ್ರೇಯ ಬುದ್ಧಿಗೆ ಇಲ್ಲ! ಕರ್ತವ್ಯ ಪ್ರಜ್ಞೆಯೇ, Categorical imperative ಈ ಸೂತ್ರದ ಪ್ರೇರಣೆ, ಬೌದ್ಧಿಕ ಹಿನ್ನೆಲೆಯದು ಅಲ್ಲ!

ಪಾಶ್ಚಾತ್ಯ ತತ್ತ್ವಜ್ಞಾನವು Nous-mind= ವೈವಸ್ವತ ಮನುವಿನ ಮಾರ್ಗದಿಂದ, ಮನು–ಸಮಯದಿಂದ, ದೂರ, ವಿರುದ್ಧ ದಿಕ್ಕಿಗೆ ಹೊರಟದ್ದು ನಿಶ್ಚಿತವಿದೆ. ಕ್ರೈಸ್ತ ಪಂಥೀಯರಲ್ಲಿ Nous-mind ತಾತ್ತ್ವಿಕ ಭೂಮಿಕೆಯ ಅರಿಸ್ಟಾಟಲ್‌ನ ಬಗೆಗೆ ಇರುವ ತಿರಸ್ಕಾರ–ದ್ವೇಷದ ಮನೋಭಾವವು ಬಯಲಿಗೆ ಬಂದಿದೆ (ಇದೇ ಪ್ರಬಂಧದ ಪು–೭೮ ನೋಡು). ವೈಟಹೆಡ್‌ರಂತಹ ಪ್ರಜ್ಞಾವಾದದತ್ತ ಒಲವು ಇರುವ ತತ್ತ್ವಜ್ಞರು ಅರಿಸ್ಟೋಟ್ಲನ 'logic'ಗೆ ಅಳುಕಿದ್ದಾರೆ!

ಲೈಬ್ನಿಝು (Leibniz) ಇವನು, ಅರಿಸ್ಟೋಟ್ಲ ಸಂಪ್ರದಾಯವನ್ನು ಎದುರಿಸಬಲ್ಲ ಸಾಂಕೇತಿಕ ತರ್ಕಶಾಸ್ತ್ರವನ್ನು ರೂಪಿಸುವ ದಾರಿಯಲ್ಲಿ ಹೊರಟಿದ್ದರೂ, ಅರಿಸ್ಟೋಟ್ಲನ ಬಗೆಗಿನ ಗೌರವ, ಪೂಜ್ಯಭಾವದಿಂದಾಗಿ ಆತನು ಅದನ್ನು ಪ್ರಕಟಿಸಲಿಲ್ಲ. ಪಾಶ್ಚಾತ್ಯರಲ್ಲಿ ಒಬ್ಬನು 'ಪೂರ್ವ' ಎಂದರೆ, ಇನ್ನೊಬ್ಬನು ಕೂಡಲೆ 'ಪಶ್ಚಿಮ' ಎಂದು ಎದುರಿಸುವುದು ವಾಡಿಕೆ ಆಗಿದೆ. ಪಾಶ್ಚಾತ್ಯ ಪರಂಪರೆಯಲ್ಲಿ ಪಂಥ, ಪಕ್ಷಾತೀತ, ಸ್ಥಳ–ಕಾಲದ ಆಚೆಗಿನ, ವ್ಯಕ್ತಿನಿರಪೇಕ್ಷ 'ಸತ್ಯ' (Universal) ಎಂಬುದರ ಅಸ್ತಿತ್ವವೇ ಮಾನ್ಯವಿಲ್ಲ. ಇದರಿಂದಾಗಿ ಅಲ್ಲಿ ನಾನಾ ಪ್ರಕಾರದ ತಾರ್ಕಿಕ ತತ್ತ್ವಜ್ಞಾನ ಬೆಳೆದು ಬಂದಿದೆ. ಇವರ ಅರ್ಥ: ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಈ ವಿಭಾಗ

ದ್ವಯದ ಸಂದರ್ಭದ ಅಂತರ್‌ವಿಸಂಗತ, ಪ್ರೇರಣಾದ್ವಂದ್ವಾತ್ಮಕ ಅಸ್ತಿತ್ವವು (Existance) ಮಾತ್ರ ಮಾನ್ಯವಿದ್ದು, ಅಂತಃಸಂಗತಿಯುಕ್ತ ಭಾವಾತ್ಮಕ, ಅನುಭವಾತ್ಮಕ ಜೀವನದ ಪಾತಳಿಯನ್ನು ಮಾನ್ಯ ಮಾಡಲಾಗುತ್ತಿಲ್ಲ! ಆದರೆ ಹಿಂದೊಮ್ಮೆ Nous = mind ಭೂಮಿಕೆಯ ದೃಷ್ಟಿಕೋನವಿದ್ದ ಕಾಲದಲ್ಲಿ ಜೀವನದ ಪಾತಳಿಗೆ ಮನ್ನಣೆ ಇದ್ದೇ ಇತ್ತು. ಇರಲೇಬೇಕು, ಎಂಬಲ್ಲಿ ಸಂದೇಹವಿಲ್ಲ.

ಗ್ರೀಕ ತತ್ತ್ವಜ್ಞಾನದ ಇತಿಹಾಸಕಾರ ಝುಲ್ಲರನು ಕಂಡು ಹೇಳುತ್ತಿರುವ ಸಂಗತಿ ಇದು. "ಗ್ರೀಕ ಪರಂಪರೆಯ ದೃಷ್ಟಿಕೋನ ವೈಶಿಷ್ಟ್ಯವು ಬದಲು ಆಗುತ್ತದೆ. ಪ್ಯಾಥ್ಯಾಗೋರಾಸ ಪಂಥದ ಪ್ರಾಬಲ್ಯದಿಂದಾಗಿ Greek mode of thought ವ್ಯತ್ಯಸ್ತವಾಯ್ತು."

ಸೋಜಿಗದ ಸಂಗತಿಯೆಂದರೆ, ಪ್ಯಾಥ್ಯಾಗೋರಾಸ ಪಂಥೀಯ ತಾತ್ತ್ವಿಕ ಭೂಮಿಕೆಯ 'ಬುದ್ಧಿ (Reason)' ಇದು 'ಕಣ್, ಗಣ್' ಇದರ ಅಂಗವಾಗಿದೆ. 'Being—ಬಯಲು' namely Reason (ಪು–೬೭) ಇರುವದರಿಂದ ಈ 'ಬುದ್ಧಿ'ಯು, ಪಿಂಡ ಬ್ರಹ್ಮಾಂಡೈಕ್ಯ ಸಿದ್ಧಿಯ ದಿವ್ಯಾಧ್ಯಾತ್ಮವನ್ನು ಪ್ರಚೋದಿಸಿರುವಂತೆ ಈ ಜೀವಿತದ (Being Becoming) ಭೌತ ಸ್ಥಲ–ಕಾಲದ ಸಂದರ್ಭದ ದ್ರವ್ಯದ ಪೃಥಕ್ಕರಣದ ದಿಕ್ಕಿನಲ್ಲೂ ಮುನ್‌ನಡೆಯಲು ಒತ್ತಾಯಪಡಿಸುತ್ತ ಬಂದಿದೆ.ಪ್ಯಾಥ್ಯಾಗೊರಾಸನಂತೂ ಸರಿ; ಎಂಪಿ.ಡೋಕ್ಲಸ್‌ನಂತಹ 'ತಾನು ಅವತಾರಿ' 'ಪವಾಡ ಪುರುಷ' ಎಂದು ಹೇಳುತ್ತಿದ್ದವನು 'ರಸಾಯನ ಶಾಸ್ತ್ರ'ವನ್ನು ರೂಪಿಸಿದ ಪ್ರಥಮರಲ್ಲಿ ಎಣಿಸಲ್ಪಡುತ್ತಾನೆ!

ಪೌರ್ವಾತ್ಯ ದಕ್ಷಿಣ ಕಪರ್ದವಸಿಷ್ಠ, ವ್ಯಾಸಾದಿಗಳು, ಅಥವಾ ಪಾಶ್ಚಾತ್ಯ ಒರ್‌ಫ್ಯುಅಸ್ ಪ್ರಭೃತಿಗಳು ಹಾಗೂ ಪ್ಯಾಥ್ಯಾಗೋರಾಸ ಪಂಥೀಯರು ಇವರು ಯೋಜಿಸಿರುವ ಮಂತ್ರ: ಮಾಟ: ಮೋಸವು ಈ 'ಮನುಜ'ನನ್ನು ನರ(ಳ)ನ ಜೀವಿತ ಪಾತಳಿಯ ಮೇಲೆ ತಳ್ಳಿಕೊಂಡು ಹೊರಟಿದೆ! ಈ ಸಂಗತಿಯನ್ನು Reason ದೃಷ್ಟಿಕೋನದ ಪ್ಲೇಟೊನ ತತ್ತ್ವಜ್ಞಾನದೊಳಗಿನ ಗವಿ (Den) ಅಥವಾ ಗುಹೆ (Cave) ಈ ರೂಪಕವು ಖಚಿತಪಡಿಸಬಲ್ಲುದು.

ಈ ಸಂದರ್ಭದಿಂದ ಸಾರ್ವಕಾಲಿಕ ಸ್ವರೂಪದ ಒಂದು ಸೂತ್ರವನ್ನು ಮತ್ತೆ ಇಲ್ಲಿ ಉಚ್ಚರಿಸಬೇಕಾಗುತ್ತಿದೆ. "ಈ ಮಾನವ, ಜೀವನ ವಿಶ್ವಸ್ಥ

ಒಂದು ಸನಾತನ ನಿಯಮಕ್ಕೆ ಅಧೀನನಿದ್ದಾನೆ." ಈ 'ಮನು'–ಜನಿಗೆ 'ದತ್ತ ಸ್ವಾತಂತ್ರ್ಯ' ಇರುವದು ನಿಜ. ಈ ಸ್ವಾತಂತ್ರ್ಯದಿಂದಾಗಿ ಇವನಿಗೆ ತನ್ನ ಬಾಳದಾರಿಯ ದಿಕ್ಕು ಯಾವುದು ಇರಬೇಕು, ಎಂಬುದನ್ನು ನಿರ್ಣಯಿಸುವ ಹಕ್ಕು ಇದೆ. I) ಪ್ರಾಣ ಲಿಂಗಜೇತಸದ ಪಾತಳಿಯ ಬುದ್ಧಿಯ ಕಣ್ಣಿನಿಂದ ಬಾಳಬಟ್ಟೆಯಲ್ಲಿ ಸಾಗಬೇಕೆ ? ಅಥವಾ II) ಪ್ರಜ್ಞೆಯ ಅಂಗವಾದ ಮನಸ್ಸಿನ–ಉಪಜ್ಞೆಯ ಅನುಜ್ಞೆಗೆ ಪರ್ಯಾಯದಿಂದ ಪ್ರಜ್ಞಾನೇತ್ರಕ್ಕೆ ಪ್ರಾಶಸ್ತ್ಯವನ್ನಿತ್ತು, ಬಾಳಬಟ್ಟೆಯಲ್ಲಿ ಸಾಗಬೇಕೆ ? ಎಂಬುದನ್ನು ಹಲವು ಬಾರಿ ತಿಳಿದೊ–ತಿಳಿಯ ದೆಯೊ ನಿರ್ಣಯಿಸುವವನು, ಈ ಮನುಜನೇ.

ಜೀವಿತದ ರಸ–ರೂಪ–ಗಂಧದ ಆಕರ್ಷಣಕ್ಕೆ ಮನಸೋತು ಬಾಳದಾರಿ ಯನ್ನು ಕ್ರಮಿಸತೊಡಗಿದರೂ ಮಹಾಕವಿ ಗಯಟೆಯಂತೆ ಜೀವನ–ವಿಶ್ವದ ನಿಯಮದ ಅನುಸಂಧಾನದಲ್ಲೂ ಹೊರಡಬಹುದು; ಲೋಕಾನುಭವಗಳ ಬೆಳಕಿನಲ್ಲಿ.

ಇದಕ್ಕೆ ಪ್ರತಿಯಾಗಿ, ಸಾಕ್ರೆಟಿಸನಂತಹ ಪ್ರಾಜ್ಞನತ್ತ ಆಕರ್ಷಿತನಾದ ಪ್ಲೇಟೊ, ಬಾಳಿನ ಉತ್ತರಾರ್ಧದಲ್ಲಿ ಪ್ಯಾಥ್ಯಾಗೋರಾಸ ಪಂಥಕ್ಕೆ ಶರಣು ಹೋಗುತ್ತಾನೆ !

ಈ ನೆಪದಿಂದ ಹೇಳಬೇಕಾದ ಸಾರ್ವಕಾಲಿಕ ಸತ್ಯಾಂಶದ ಒಂದು ಮಾತು: ಈ ಮನುಜನು, ಪ್ರಜ್ಞಾನೇತ್ರದ ಉಪಾಸಕನಾಗಿ ಬಾಳಬಹುದಾದಂತೆ, ನರ (ಳ) ತ್ವಕ್ಕೆ ಪ್ರಾಧಾನ್ಯವನ್ನಿತ್ತಲ್ಲಿ 'ದಿವ್ಯಚಕ್ಷು', ಅಕ್ಷದ (ಕಣ್ಣು > ಗಣ್ಣು) ಶಕ್ತಿಯ ಆರಾಧಕನಾಗುವ ಅನಿವಾರ್ಯತೆಯೂ ಉಂಟು.

ಈ ಮಾತು ಬಂದದ್ದು ಪ್ಲೇಟೋನ 'ಗವಿ' ಅಥವಾ 'ಗುಹೆ'ಯ ರೂಪ ಕದ ಸಂದರ್ಭದಿಂದ. ವೈವಸ್ವತ ಮನುಧರ್ಮದ ಪರಿಭಾಷೆಯ 'ಗುಹೆ' ಮತ್ತು ಪ್ಲೇಟೋನಿಗೆ ಅಭಿಪ್ರೇತ ಗುಹೆ– ಗವಿ ಇದು ಬೇರೆಯಲ್ಲ. ಇವೆರಡರ ಹಿಂದಣ ಅನುಭವದ ಆಕೃತಿಯು ಸಮಾನವೇ ಇದೆ ! ಈ ಪ್ರಾಣಿ–ಮಾತ್ರಗಳಿಗೆಲ್ಲ ಆಧಾರ ಭೂಮಿ : ನೆಲ : ಬಯಲು (Space) ಇದು ತನ್ನ ಮೈಸುತ್ತ ತಿರುಗುತ್ತಿರುವ ದುಂಟು.

ಗತಿಯಲ್ಲಿ ಇರುವ ಬಯಲು = ನೆಲ ಇದನ್ನು 'ಕಾಲ' ಎಂಬ ವಾಡಿಕೆ ಯಿದೆ. ಆದರೆ, ಈ ಗತಿ ರೂಪ 'ಕಾಲ' ನೆಲದ ಅಂಗವೇ ಹೊರತು ಇದಕ್ಕೆ

ಬೇರೆಯಾದ ಅಸ್ತಿತ್ವ = ಸ್ಥಾನವೇ ಇಲ್ಲ ಭಾರತೀಯ ಪೂರ್ವಪರಂಪರೆಯಲ್ಲಿ 'ಛಾಯಾ ಭಗವತೀ' ಎಂದು ಈ 'ಬಯಲನ್ನು' ಕಂಡದ್ದಾಗಿದೆ. ಕನಕನಿಗೆ 'ಬಯಲು, ಆಲಯದಲ್ಲಿ ಇರುವದಾಗಿ ಕಂಡಿತೆಂದು ಆತನ ಮುಂಡಿಗೆಯ ಮಾತಿನಿಂದ ಗೊತ್ತಾಗುತ್ತದೆ. ಈ ಕನಕನು ಕಂಡ 'ಆಲಯದೊಳಗಿನ ಬಯಲು' ಗ್ರೀಕ ಪೆರ್ಮೆನೈಡಸನ ವ್ಯಕ್ತಿಸಾಪೇಕ್ಷ ಬಯಲು = Being ಇವೆರಡರಲ್ಲಿ ಪೂರ್ಣ ಹೋಲಿಕೆಯಿದೆ.

ಆದರೆ, ಭೇದವೂ ಉಂಟು. ಪೆರ್ಮೆನೈಡ್ಸ್ ಕೇವಲ 'Being' (ಕಣ್) ಭಕ್ತ. ಸ್ಥಲಕ್ಕೆ ಬದ್ಧ 'ಕಾಲ' ಎಂಬುದರ ಸ್ವತಂತ್ರ ಅಸ್ತಿತ್ವವು ಇವನಿಗೆ ಮಾನ್ಯವಿದ್ದಿಲ್ಲ. ಈ ನಿರ್ಣಯವನ್ನು 'Not Being' ಎಂದು ಹೆಸರಿಸಿರುವ ಕಾರಣವೇನು ಮತ್ತೆ ?

ಆದರೆ, ಕನಕನ ನಂಬುಗೆಯ ಸ್ವರೂಪವು ಬೇರೆ ಬಗೆಯದು ಇತ್ತು : 'ಭಗ'ವಂತನು ಇರುವ ಎಡೆ, 'ಆ–ಲಯ' ಎಂಬ ನಂಬುಗೆ ಕನಕನದು. ಕನಕನು, 'ಕಿಂಡಿ'ಯೊಳಗಿಂದ ಭಗ–ವಂತ ಶ್ರೀಕೃಷ್ಣ ಪರಮಾತ್ಮನನ್ನು (?) ಕಾಣುವ ವಾಡಿಕೆಯಿದ್ದಿತೆಂದು ಸಂಪ್ರದಾಯವು ಹೇಳುತ್ತದೆ. 'ಭಗ' = ಟೊಳ್ಳು ಇದೆ. ಆದರೆ 'ಭಗ'–ವಂತ ಇದು ಕೇವಲ ಕಾಲ್ಪನಿಕ.

ಕನಕನ ಮುಂಡಿಗೆಯನ್ನು ಇಡಿಯಾಗಿ ವಿಮರ್ಶಿಸುವ ಆವಶ್ಯಕತೆಯಿದೆ. 'ಬಯಲು ಆಲಯದ ಒಳಗೊ?' ಈ ಮಾತಿನಲ್ಲಿ ವ್ಯಕ್ತಿಸಾಪೇಕ್ಷ [೦], ಆಲಯದೊಳಗಿನ ಬಯಲು ಅಭಿಪ್ರೇತವಿದೆ. ಆದರೆ, ಇದಕ್ಕೆ ಪ್ರತಿಯಾಗಿ ಆಲಯವು [೦], (ಇದೇ) ಬಯಲದೊಳಗೊ ? ಎಂಬ ಈ ವಾಕ್ಯವು ಆಭಾಸಾತ್ಮಕ ಅರ್ಥದ್ದಾಗಿದೆ. ಈ ವಾಕ್ಯದಲ್ಲಿ ಇಡೀ ಪ್ರಪಂಚವೇ ಆಲಯ = ಕಂಡಿ (ಕಣ್ಣು) ಆಗುತ್ತಿದೆ !

ವ್ಯಕ್ತಿಸಾಪೇಕ್ಷ 'ಆಲಯವು' [೦] ಇದು 'ಅನುಭವ' ನಿಜ. ಆದರೆ ವ್ಯಕ್ತಿನಿರಪೇಕ್ಷ ಆಲಯ (ಯೋನಿಮಂಡಲ) ಇದೆ ಎಂಬುದು ಕವಿ ಕಲ್ಪನಾ ವಿಲಾಸವೇ ಸರಿ.

ದಿವ್ಯಾಧ್ಯಾತ್ಮಗಳಲ್ಲಿ, ಈ ಬಗೆಯ illegitimate abstractions ಮೋಸ ತರುತ್ತಿವೆ : ವ್ಯಕ್ತಿಸಾಪೇಕ್ಷ ೧) 'ಜನಕ' ! ಇದ್ದಾನೆ; ಆದರೆ ವ್ಯಕ್ತಿನಿರಪೇಕ್ಷ 'ವಿದೇಹಿ–ಜನಕ' ನನ್ನು ಈ ಚರಲಿಂಗ ರೂಪೀ ಆದಿತ್ಯನನ್ನು

ಭಾರತೀಯ ಹಾಗೂ ಪಾಶ್ಚಾತ್ಯ ದಿವ್ಯಾಧ್ಯಾತ್ಮಗಳಲ್ಲಿ ಕಲ್ಪಿಸಿ ಈ ಕಲ್ಪಿತವನ್ನು 'ವಾಸ್ತವ' ಎಂದು ನಂಬಿಸಲಾಗಿದೆ.

ಅಂತರಿಕ್ಷಸ್ಥ 'ಛಾಯಾ ಭಗವತಿ' : ಗುಹೆ : ಗವಿ ಇದು ಭೂಲೋಕ ದಲ್ಲಿ ಜೀವಿತದ ಪಾತಳಿಯ ಮೇಲೆ ಅನುಭವದಾಯಕವಿದೆ. ಮನು= ವೈವಸ್ವತ–ಸಂಪ್ರದಾಯದ ಪರಿಭಾಷೆಯಲ್ಲಿ, (ಸಂ.) ಭವಚಕ್ರ ಅಥವಾ 'ಕಾಲ' (ಮೃತ್ಯು) ಚಕ್ರ ಎಂಬ ಹೆಸರಿನಿಂದ ಪ್ರಸಿದ್ಧವಿದೆ. 'ಈ ಛಾಯಾ ಭಗವತಿ' ಎಂಬುದು ಕಾಲಿ (ಕರಿ–ಮಾಯಿ) ದುರ್ಗೆಯ ಇನ್ನೊಂದು ಹೆಸರು. ಇದನ್ನು 'ನೌಕೆ' ಎಂದೂ ವೇದ ಹೇಳುತ್ತದೆ. ಕಾಲಿದಾಸನು, 'ಉಡುಪೇನ' ಸಂಸಾರ ಸಾಗರ ದಾಟುವ ರೂಪಕವನ್ನು ಯೋಜಿಸಿದ್ದಾನೆ.

ಪಿಂಡ–ಬ್ರಹ್ಮಾಂಡ ಐಕ್ಯದ ಅನುಸಂಧಾನದಿಂದ ಅರಿಕೆಗೆ ಬರುವ 'ಜೀವಿತ'ವು ನಿತ್ಯ ಗುಹೆ 'ಗವಿ'ಯಂತಹ ವೃತ್ತಾಕೃತಿಯದೇ ಇರುತ್ತದೆ. ಎಂಬ ನಿಷ್ಕರ್ಷವನ್ನು ಹಲವು ಬಾರಿ ಈ ಮೊದಲು ವಿವರಿಸಿದ್ದಾಗಿದೆ. (ವೈವಸ್ವತ ಪು. ೬೩–೭೩) : ಅಲ್ಲದೆ ಇಲ್ಲಿ ತಾಯ್ಗಂಡತನದ ಪ್ರೇರಣೆಯೂ ಹುದುಗಿರುವ ದನ್ನು ಸ್ಪಷ್ಟಪಡಿಸಲಾಗಿದೆ. (ಪು–೭೧)

ಪ್ಲೇಟೋನ ತತ್ತ್ವಜ್ಞಾನದಲ್ಲಿ ಬರುವ ಗುಹೆಯ ಈ ವರ್ಣನೆಯು ವಿಮರ್ಶಾರ್ಹವಿದೆ. ಈ ಪ್ಲೇಟೋನ ಮಾತಿನ ಚಾಕಚಕ್ಯ ಕಲಾತ್ಮಕ ನಿವೇದನ ಸತ್ಯವನ್ನು ಬಿಚ್ಚಿ ಇಡುತ್ತದೆ. ರಸೆಲ್ಲರೇ ಹೇಳುತ್ತಾರೆ Plato possessed the art to dress up illiberal suggestions in such a way that they deceived future ages (p-125)

ಪ್ಲೇಟೋನ ಆದರ್ಶ ರಾಮರಾಜ್ಯದಲ್ಲಿ, ದಿವ್ಯಜ್ಞಾನ ದೀಕ್ಷೆಪಡೆದು ಆ–ಮರಣ ವಿರಕ್ತ ಬ್ರಹ್ಮಚಾರಿಗಳಾದ, ಲೋಕ–ಕಲ್ಯಾಣಕ್ಕಾಗಿ ಅನೇಕ ಜಂಗಮ ಗುರುವರ್ಗವು ಬಂದುದುಂಟು. ಇವರನ್ನು ಪ್ಲೇಟೋ 'ಫಿಲಾಸೋಫರಸ್' ಎಂದಿದ್ದಾನೆ.

"The philosopher who is to be a guardian must return into the cave, and live among these who have never seen the Sun of truth (p-152)"

'ಸತ್ಯಸೂರ್ಯ'ನನ್ನು ಕಂಡರಿಯದ ಪಾಮರ ನರವರ್ಗದ ಮಾರ್ಗದರ್ಶಕ (ಸಂರಕ್ಷಕ)ನಾಗಲಿರುವ ತತ್ತ್ವಜ್ಞ (ಗುರುವು), ಆ ಗವಿಗೆ ಮರಳಿ

ಬರಲೇಬೇಕು.

ವೃತ್ತಾತ್ಕೃತಿಯ [o] ಗವಿಯಂತಹ ಕತ್ತಲಿನಿಂದ ಕವಿದ ಈ ಜೀವಿತ ಪಾತಳಿಯ–ಮೇಲಣ ಜನದ ನಿರ್ದೇಶವು ಹೀಗಿದೆ; 'Behold ! human beings living in an underground den, which has a mouth open towards the light and reaching all along the den.... ....here they are haiend so, that they cannot move and can onlv see before them....' (P-147)........all that they see are shadows of them selves....Inevitably they regard the shadows as real....at last some man succeed in escaping from the cave to the light of the own........(147)

(ಸಂ) ಭವ ಚಕ್ರದ [o] ಬಂಧನದಿಂದ ಬಿಡುಗಡೆ ಹೊಂದಿ 'ಸತ್ಯ ಸೂರ್ಯ' (?) ನನ್ನು ಕಾಣುವ ಅರ್ಹತೆ ಬರಲು ಗುರುದೀಕ್ಷೆ ದೊರೆಯಬೇಕಾಗುತ್ತದೆ.

ಪ್ಲೇಟೋನ 'ಗುಹ್ಯ' ಭಾಷೆಯಲ್ಲಿ ಈ 'ಗವಿ' ಮತ್ತು ವ್ಯಕ್ತಿ ಸಾಪೇಕ್ಷ 'ಕಣ್' (Eye) ಬೇರೆಯಲ್ಲ !

**ಹೃದಯ ಗುಹೆಯೊಳಗಿನ** Soul = ಆ–ತ್ಮನ್ ಮತ್ತು 'ಕಣ್' ಬೇರೆಯಲ್ಲ !. The soul is life an eye. When resting upon that on which truth and being shine....is radiant with intelligence (P-146)

ಭಾರತೀಯ ದಿವ್ಯಾಧ್ಯಾತ್ಮದ ಪರಭಾಷೆಯಲ್ಲಿ ಪ್ಲೇಟೋನ ಈ 'ಸತ್ಯ ಸೂರ್ಯ' = ಸತ್ಯಚಕ್ಷು (eye), ಭವ ಬಂಧನ = ಕಾರಕ ಗುಹೆಗೆ ಸಮಾಂತರವಿದೆ !

"ಅ–ಸೂರ್ಯನಾಮ ತ್ರೀಲೋಕಾಃಅಂಧೇನ ತಮಸಾಽವೃತಾಃ"

ಸೂರ್ಯನಿಲ್ಲದ ಈ ಕತ್ತಲು ಕವಿದ ಲೋಕದಲ್ಲಿ ಇರುವ ಜನದ ಈ ಉಲ್ಲೇಖವು ಈ ಈಶೋನಿಷತ್ತಿನಲ್ಲಿ ಇದೆ. ಈ ಉಪನಿಷತ್ತಿನಲ್ಲಿಯೇ 'ಪ್ರಜಾಪತ್ಯ ಸೂರ್ಯ'ನಿದ್ದಾನೆ! ಇದು ಮೋಸ ನಿಜವಾಗಿ ಇದು 'ಸತ್ಯಚಕ್ಷು' = ವಿಶ್ವ ಪ್ರಸವದ ಕಣ್ಣು' ಇಲ್ಲಿ ಗಣ್‌ನ್ನು (ವಿಷ್ಣುವನ್ನುಕಲ್ಪಿಸಿ,) 'ಪ್ರಜಾಪತ್ಯ' ಸೂರ್ಯ ಪುಂ–ಲಿಂಗೀರೂಪಕ್ಕೆ ತಿರುಗಿಸಿದ್ದಾಗಿದೆ.

ಮೈತ್ರಾಯಣೀ ಉಪನಿಷತ್ತಿನಲ್ಲಿ (೬-೩೫) 'ಸತ್ಯ' 'ಧರ್ಮಾಯ ದೃಷ್ಟಯೇ' ಎಂಬ ಈಶದ ಪಾಠಕ್ಕೆ ಬದಲಾಗಿ 'ಸತ್ಯ ಧರ್ಮಾಯ ವಿಷ್ಣವೇ' ಎಂಬ ಮಾತು ಇದೆ.

ಈ ಸತ್ಯಚಕ್ಷು [o] ಸೂರ್ಯನಲ್ಲಿ ಇರುವನೆಂಬ ಪುರಿ-ಶಯ = ಪುರುಷನು ನಾನೇ (ಸಃ ಅಹಂ) ಎಂಬ ಧ್ಯಾನ ಮಂತ್ರವನ್ನು ಬೋಧಿಸಲಾಗುತ್ತಿದೆ! (ಈಶ ೧೪, ೧೫) ಈ ಉಪನಿಷತ್ತಿನಲ್ಲಿಯೇ 'ಸ್ವಯಂಭೂ' ಇದ್ದಾನೆ! ಇವನು 'ಲಿಯತೇ ಇತಿ ಲಿಂಗಃ' ಸ್ವರೂಪನಷ್ಟೇ; ಆದಕಾರಣ, ಇವನನ್ನು 'ಶುಕ್ರಂ, ಅಕಾಯಂ' ಎಂದು ವರ್ಣಿಸಲಾಗಿದೆ(s)

ಬೃಹದಾರಣ್ಯಕದಲ್ಲಿ ಹೇಳಿರುವ 'ಚಕ್ಷುಃ ವೈ ಸತ್'ತ್ಯಃ' ಎಂಬುದು, ಪ್ಲೇಟೋನ Eye, Sun of truth ಈ ವರ್ಣನೆಯನ್ನು ಹೋಲುತ್ತಿರುವ ಸೋಜಿಗ ನೋಡಿಕೊಳ್ಳಿ.

ಈ ತತ್ವಜ್ಞನೆಂಬ ಪ್ಲೇಟೋ ತನ್ನ ಕಲ್ಪನೆಯ ಆದರ್ಶವಾದ 'ರಾಮ ರಾಜ್ಯದಲ್ಲಿ' ದಾಂಪತ್ಯ ಧರ್ಮಕ್ಕೆ ಪ್ರಾಶಸ್ತ್ಯವನ್ನು ಕೊಟ್ಟಿಲ್ಲ. ಬುದ್ಧಿವಂತ ಸು-ಪ್ರಜಾ ನಿರ್ಮಾಣಕ್ಕೆ ಗಮನಕೊಟ್ಟಿಲ್ಲ. ಬುದ್ಧಿವಂತ-ಸು-ಪ್ರಜಾನಿರ್ಮಾಣಕ್ಕೆ ಗಮನ ಕೊಡದಿದ್ದರೆ, ಆದರ್ಶ ರಾಮರಾಜ್ಯವು ಅಸ್ತಿತ್ವಕ್ಕೆ ಬರಲಾರದು. ರಾಜ್ಯದಲ್ಲಿ ಮೇಧಾವಿಗಳ ಕೊರತೆ ಬೀಳಬಾರದು. ಸಮರ್ಥ ಆಡಳಿತಗಾರರು ದೊರೆಯಬೇಕು, ಎಂಬ ಕಾರಣದಿಂದ ಪ್ಲೇಟೋ ಸುಪ್ರಜಾ ನಿರ್ಮಾಣದ ಒಂದು ಹಂಚಿಕೆ ಹೇಳುತ್ತಾನೆ. ಕೌಟುಂಬಿಕ ಜಂಜಡದಲ್ಲಿ ಸಿಕ್ಕು ಬೀಳದೆ. ಲೋಕ ಹಿತಾರ್ಥವಾಗಿ ವಿರಕ್ತರಾಗಿ, ಅವಿವಾಹಿತ ಬ್ರಹ್ಮಚಾರಿಗಳಾಗಿ, ಇರುವ 'ಗುರು'ಗಳ ನಿಯೋಗದಿಂದ ಆಗುವ ಸಂತತಿಯು ಆದರ್ಶ ಪ್ರಜೆಯಾಗಬಹುದು, ಎಂದು ಪ್ಲೇಟೋನ ನಂಬುಗೆ ! ವ್ಯಾಸನೂ ನಿಯೋಗ ಬೋಧಿಸಿದ್ದಾನೆ !

V

ಆದಿಯಲ್ಲಿ, ಈ 'ಮನು'-ಜರ, ಅರ್ಥ=ವಿಚಾರ=ಜ್ಞಾನಕ್ಕೆ ಕಾರಣವಾದ ಪ್ರಜ್ಞಾ : ಪ್ರಕಾಶ ರೂಪ ನೇತ್ರ (ಒಳತಿಳಿಬೆಳಕು), ಮಾನವರಿಗೆಲ್ಲ ಸಮಾನವೇ ಇದ್ದ ಯುಗವು ಒಂದಾಯ್ತು. 'ಸಮಾನಂವೋ ಮನಃ' ಎಂಬ ಪ್ರಜ್ಞೆ ಅಂದಿನ ಸಮಾಜ: ಸಮಷ್ಟಿಯ ಸ್ಥಾನದಲ್ಲಿ ಇತ್ತು.

"ನಾವು ಮನು-ಜರು, ಆದಕಾರಣ, ನಾವು ನಮ್ಮ ಅಂತಃಪ್ರಜ್ಞೆ

ಯಿಂದ ಪ್ರಚೋದಿತ ಮನಸ್ಕರಾಗಿ ಬಾಳಬೇಕು." ಎಂಬ ಸಂಕಲ್ಪವು ನಿಶ್ಚಯವು–ಇಂದಿನಲ್ಲಿಯೂ ಕಾಣಿಸಿಕೊಂಡರೆ, ಈ ಬಗೆಯ ಪ್ರಾಮಾಣಿಕ ನಿಷ್ಠೆಯ ಆಚಾರ ವಿಚಾರದ ಭಾಷಿಕರಲ್ಲಿ, ಆ ಪ್ರಜ್ಞಾನೇತ್ರ ಪ್ರೇರಕ 'ಆದ್ಯಃ ಮನುಃ' ವೈವಸ್ವತನ ಮನ್ವಂತರವು ಮರಳಿ ಕಾಣಿಸಿಕೊಳ್ಳಲು ಶಕ್ಯವಿದೆ.

ಇದು ಬರಿ ಊಹೆ–ಅಂದಾಜು ಅಲ್ಲ, ವಿವಸ್ವನ್ >'ವೈವಸ್ವತ'ನು 'ಆದಿತ್ಯ'ನಾದನು ಎಂಬ ಭ್ರಾಂತಿ ಪ್ರಬಲವಾದಾಗ, ಭಾರತೀಯ ಸಂಸ್ಕೃತಿಕ ಇತಿಹಾಸದಲ್ಲಿ 'ಸವಿತೃ' ಎಂಬ ಹೆಸರಿನ ಧೀಃ ಪ್ರಜ್ಞಾ ಪ್ರಚೋದಕ ಪ್ರಕಾಶತತ್ತ್ವದ ಉಪಾಸನೆಯ ಪುನರುತ್ಥಾನವು ಆಗಿದ್ದೂ ಉಂಟು ! ಸವಿತೃ ಪ್ರಾರ್ಥನಾ ಮಂತ್ರ ದೃಷ್ಟಾರನೆಂಬ ಖ್ಯಾತಿಯ ವಿಶ್ವ (ಶ್ವಾ)ಮಿತ್ರನ ಹೆಸರು ತಲೆತಲಾಂತರಗಳಿಂದ ಇಂದಿನವರೆಗೂ ಉಳಿದು ಬಂದದ್ದು ನಿಷ್ಕಾರಣವಲ್ಲ !

ಫಾರ್ಶಿಗಳ ಪವಿತ್ರ ಗ್ರಂಥವಾದ ಅವೆಸ್ತದಲ್ಲಿ ಹೇಳಿರುವ ಮಾತು ಸುಳ್ಳಲ್ಲ; ಕತ್ತಲೆ ಪ್ರೇರಿಸುವ ಲೈಂಗಿಕ ಪ್ರಚೋದನೆಯ ದುಷ್ಟ, ಕ್ರೂರ, ಪಾಪಿಃ ಶಕ್ತಿಯು (ಅರ್ಹಿಮನ್), ಪ್ರಕಾಶವನ್ನು (ಅಹುರ ಮಝ್ದನನ್ನು), ನಿತ್ಯವು ವಿರೋಧಿಸುತ್ತಲೇ ಇರುತ್ತದೆ. ಆದರೆ ಈ ಸಂಘರ್ಷದಲ್ಲಿ, ಇಂದು ಅರ್ಹಿಮನ್=ಪಾಪೀ ದುಷ್ಟ ಶಕ್ತಿಯು (ಕತ್ತಲೆ) ಇದೇ ಪ್ರಭಾವಶಾಲೀ ಆಗಿದ್ದರೂ, ಅಹುರ=ಮಝ್ದನಿಗೆ=ಪ್ರಕಾಶಕ್ಕೆ ಕೊನೆಗೆ ಗೆಲುವು ನಿಶ್ಚಿತ. 'ಸತ್ಯಂ ಏವ ಜಯತಿ, ನಾನೃತಂ' ಎಂಬ ಈ ನಿಷ್ಠೆ ಭಾರತೀಯರಲ್ಲಿಯೂ ಉಂಟು.

ಆದರೆ, ವಿಶ್ವ (ಶ್ವಾ)ಮಿತ್ರನ ಪುನರುತ್ಥಾನದ ಪ್ರಯತ್ನವನ್ನು ವ್ಯರ್ಥವಾಗಿಸಲು 'ಸವಿತೃ' ಸ್ವರೂಪ ಧೀಪ್ರಜ್ಞೆ ಪ್ರಚೋದಕ ಪ್ರಕಾಶ ತತ್ತ್ವದ ದೈವತ ಪ್ರತಿಮೆಯನ್ನು ಭಿನ್ನವಾಗಿಸಲು ನಾಚದಿರುವ ಈ ಲೈಂಗಿಕ ಪ್ರಚೋದನೆಯು ಮರಳಿ ಪ್ರಭಾವಶಾಲಿಯಾಗಿರುವದನ್ನು ಇಂದು ಕಾಣುತ್ತಲಿದ್ದೇವೆ ! ವಿಶ್ವಾಮಿತ್ರನ ವಿರೋಧಿ ವಶಿಷ್ಠ ದಕ್ಷಿಣಕಪರ್ದನ ಕೈವಾಡವು ಇದು.

ಉಪಲಬ್ಧ ಪ್ರಮಾಣಗಳ ಬಲದಿಂದ 'ಸವಿತೃ' ಪ್ರತಿಮಾ ಭಂಜನದ ನೀಚ ಕೃತ್ಯವು ಸಂಭವಿಸಿರುವ ಕ್ರಮವನ್ನೂ ಕಾಲವನ್ನೂ ಸ್ಥೂಲವಾಗಿ ಕಂಡು ಹಿಡಿಯಲು ಶಕ್ಯವಿದೆ. ಅವೆಸ್ತದಲ್ಲಿ ವೈವಸ್ಥತನಿದ್ದಾನೆ. ಆದರೆ, ಸವಿತೃ, ವಿಶ್ವಾಮಿತ್ರ ಈ ಪ್ರತಿಮೆಗಳು ಅಲ್ಲಿ ಇಲ್ಲ. ಆದಕಾರಣ, ಸವಿತೃವು ವಿವಸ್ವನ್ ದೈವಕ್ಕಿಂತ ಅರ್ವಾಚೀನ ಎಂಬುದು ನಿಃಸಂದಿಗ್ಧವಿದೆ.

ವಿವಸ್ವನ್ ಪ್ರತಿಮಾಭಂಜನದ ಹೀನಕೃತ್ಯಕ್ಕೆ, ('ವ್ಯಾಸ ಪ್ರಸಾದತ್' ಲಭಿಸಿದೆ. ಎಂಬ) ಶ್ರೀಮತ್ 'ಭಗ'-ವತ್ ಗೀತೆಯಲ್ಲಿಯೇ ಬಲವಾದ ಪ್ರಮಾಣಗಳು ಉಂಟು. 'ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನ್ ಅಹಂ' ಎಂಬಲ್ಲಿ 'ಕಾಲಃ ಅಸ್ಮಿ' ಎಂಬ ಕರಿಮ ಕೃಷ್ಣನು ವಿವಸ್ವನ್ ದೈವತಕ್ಕೆ (ಸೂರ್ಯನಿಗೆ) ಯೋಗ ಬೋಧಿಸಿದ. ಕಣ್ಣು ಮುಚ್ಚಿಸಿ, ಸಮಾಧೀ ಸಿದ್ಧಿಯನ್ನು ಈ 'ಭಗ'ವಂತನು ಕರುಣಿಸಿದ್ದಾನೆ. ಹೀಗೆ ವೈವಸ್ವತ ಪ್ರತಿಮೆ ನಷ್ಟವಾಯ್ತು. ಆದರೆ ಈ ಗೀತೆಯಲ್ಲಿ 'ಸವಿತೃ'ವಿನ ಉಲ್ಲೇಖವು ಇಲ್ಲ ! ಋಗ್ವೇದದ ಇಂದಿನ ಪಾಠದಲ್ಲಿ ಸಹ 'ಸಾವಿತ್ರಿ ಎಂಬ ರೂಪ ಸ್ಪಷ್ಟ ಸ್ತ್ರೀ ಸಂಕೇತವಾಗಿ ಮಾರ್ಪಟ್ಟಿಲ್ಲ. ಈ ರೂಪವು, ಛಾಂದೋಗ್ಯದಲ್ಲಿಯೂ ಇಲ್ಲ. ಬೃಹದಾರಣ್ಯಕದಲ್ಲಿ ಕಾಣಿಸಿಕೊಳ್ಳುತ್ತದೆ. (೫-೧೪-೫.) ಉಪನಿಷತ್ತಿನಲ್ಲಿ 'ಚಕ್ಷುಃ ವೈ ಸತ್ತ್ಯಂ' (ಯೋನಿ ಮಂಡಲ) ಆರಾಧಿಸುವ ಸಂದರ್ಭದ ಆಚಾರಂಗದಲ್ಲಿ ಈ ಸಾವಿತ್ರಿ [೦] ಹೆಸರು ಬರುತ್ತದೆ. (೪-೫)

ವೇದದಲ್ಲಿ, ಸವಿತೃವು ಸಾವಿತ್ರಿಯಾಗಿಲ್ಲ. ಆದರೆ ಇನ್ನೊಂದು ಬೇರೆ ನಿಟ್ಟಿನಿಂದ ಈ ಪ್ರಯತ್ನಕ್ಕೆ ಪ್ರಾರಂಭವಾದುದನ್ನು ಕಾಣಲು ದೊರೆಯುತ್ತದೆ. ಇದು 'ಗೀಃ' ವಾಣ-ವಾಣಿಯ ದಾರಿಯಲ್ಲಿ ಆಗಿರುವ ಮಾರ್ಪಾಟು ಎಂಬುದನ್ನು ನಿದರ್ಶನಕ್ಕೆ ತರುವ 'ಗಾ'ಯತ್ರಿಯ ಪೂರ್ವ ರೂಪಗಳು ಈ ವೇದದಲ್ಲಿ ದೊರೆಯುತ್ತವೆ. 'ಗಾಯ'='ಉರುಗಾಯ' ಎಂಬ ವಿಶೇಷಣವು ವಿಷ್ಣುವಿಗೆ ಇದೆ ! 'ಗಾಯತ್ರೀ' ಎಂಬ ರೂಪವು, ಹತ್ತನೆಯ-ಕೊನೆಯ-ಮಂಡಲದಲ್ಲಿ ಮಾತ್ರ (೧೪. ೧೬. ೧೩. ೦.೪) ಎರಡೇ ಬಾರಿ ಇದೆ ! 'ಗಾಯತ್ರೀ' ರೂಪಕ್ಕೂ ಮುಂಚಿನ ಹಂತದಲ್ಲಿ 'ಗಾಯತ್ರ' ಇದು ಹಲವು ಬಾರಿ, ಬೇರೆ ಬೇರೆ ಮಂಡಲದಲ್ಲಿ ಇದೆ. ಆದರೆ ಸವಿತೃವನ್ನು 'ಹೆಣ್ಣು' ಮಾಡುವ ಪ್ರಯತ್ನವೂ ತೆರೆಯ ಮರೆಯಲ್ಲಿ ಈ ವೇದದಲ್ಲೆ ಉಂಟು. ತೀರ ನಿರ್ಲಜ್ಜತನ ಇನ್ನೂ ತಲೆಯೆತ್ತಿರಲಿಲ್ಲ, ಎಂದು ಕಾಣುತ್ತದೆ. ಏಕೆಂದರೆ ಇದು ನೇರ ಪ್ರಯತ್ನವಲ್ಲ ! 'ತಿಳಿಯಿತು, ತಿಳಿಯಲಿಲ್ಲ' ಎಂಬ ಹಾಗಿನ ಕೈಚಳಕವು ಈ ವೇದದಲ್ಲಿ ಇದೆ. ಆದಿತ್ಯರೂಪ (ಲಿಂಗ) ವರುಣರಲ್ಲಿ ಸವಿತೃವನ್ನು' ಕಳಿಸಿದ್ದಾಗಿದೆ.

ಈ ಸ್ಥಿತ್ಯಂತರದ ಶ್ರೇಯಸ್ಸು, 'ವಿಷ್ಣುಃ ಯೋನಿಂ ಕಲ್ಪಯತು' ಎಂಬ ಶಕ್ತಿಯ ಈ ವಿಷ್ಣು ಸಂಪ್ರದಾಯಕ್ಕೇ ಸಲ್ಲುತ್ತದೆ. ಪ್ರೊ. ಬಹ್ಲರನು, ನೂರು

ವರುಷಗಳ ಹಿಂದೆಯೇ ಕಂಡು ಹಿಡಿದಿರುವ ಈ ಸ್ವಭಾವವು ಇಂದಿನ ಸಂಹಿತೆಯಷ್ಟು ಪುರಾತನ ಕಾಲದಿಂದಲೇ ನಮ್ಮವರಲ್ಲಿ ರಕ್ತಗತವಾಗಿತ್ತೆಂದು ಸಿದ್ಧವಾಗುತ್ತಿದೆ. 'ಸ್ಮೃತಿ' ಗ್ರಂಥಗಳ ಸಂಶೋಧನೆಯ ಸಂದರ್ಭದಲ್ಲಿ ಆತನಿಗೆ ಬಂದ ಅನುಭವವು ಇದು: "The Vaishnavas seem to have been most unscrupulous in forgeries of Smritis (A Digest of Hindu laws 1857 : p XXXIV ಹಿಂದೂ ಎಂಬ ಧರ್ಮ–ಪ್ರವಾಹ ಪತಿತರ ಕರ್ಮ ಪು. 36.)

ಈ ಸವಿತೃ ಸೂರ್ಯನು, ವೇದದಲ್ಲಿ 'ಗಾಯಿತ್ರಿ' ರೂಪಕ್ಕೆ ತಿರುಗಿದ್ದರೂ 'ಗಾಯತ್ರೀ'ಯನ್ನು ಹೆಣ್ಣು 'ಮಾತೆ' (ಸವಿತೃ = ಪ್ರಸವಿತೃ) ಎಂಬರ್ಥದಲ್ಲಿ ಯೋಜಿಸಿದ್ದೂ ಉಂಟು.

ಅರ್ವಾಚೀನ ಸೂರ್ಯ–ನಾರಾಯಣ ಈ ದೈವತವು ಆಕಾರ ಪಡೆಯುವಲ್ಲಿ 'ಸೂರ್ಯ' (= ಸವಿತೃ) ಮಂಡಲ [o] ರೂಪವು ಅಭಿಪ್ರೇತವಿರಬೇಕು, ಎಂದು ಬಗೆಯಲು ಅವಕಾಶವಿದೆ. ಸೂರ್ಯ ನಮಸ್ಕಾರಗಳ ಆಹ್ನಿಕದ ಕೊನೆಯ ಧ್ಯಾನ ಮಂತ್ರವೇ ಇದಕ್ಕೆ ಪ್ರಮಾಣ.

ಆದರೆ ಈ 'ನಾರಾಯಣ' ನಾಮಕ್ಕೆ ವೇದದಲ್ಲಿ ನೇರವಾಗಿ ಸ್ಥಳವಿಲ್ಲ. ಆದರೂ 'ಪುರುಷ' ಸೂಕ್ತದ ದಶಾಂಗುಲನ (ನಾರ–ಅಯನದ) ಸ್ತೋತ್ರ ಸೂಕ್ತಕಾರ ಕವಿ, ಎಂದು 'ನಾರಾಯಣ'ನ ಹೆಸರಿರುವಲ್ಲಿ ಅಂತಃಸಂಗತಿ, ಔಚಿತ್ಯವು ಉಂಟು.

ಈ ಪುರಿ–ಶಯ (ನ) ಪುರುಷನನ್ನು 'ಸೂರ್ಯ'ನನ್ನಾಗಿಸುವ ಪ್ರಯತ್ನಗಳು ಈ ವೇದದಲ್ಲಿ ಇವೆ. ವಿಷ್ಣೋಃ ನು ಕಂ = 'ವೀರ್ಯಾಣಿ' ಸ್ತೋತ್ರ ಮಾಡುವ ಈ ಸೂಕ್ತದಲ್ಲಿ ಕೈಚಳಕ ಕಾಣಬಹುದು.

ಬೃಹದಾರಣ್ಯಕವು, 'ಸಾವಿತ್ರೀ ಸತ್ಯಚಕ್ಷು' ಉಪಸ್ಥಾನ ಮಂತ್ರ ಹೇಳುತ್ತದೆ; ಆದ ಕಾರಣ ಈ ಉಪನಿಷತ್ತು ಗೀತೆಗಿಂತ ಅರ್ವಾಚೀನವಿರಲಿಕ್ಕೇ ಬೇಕು.

(ಬ)

ಐನ್ಸ್ಟನ್ನರು ಹೇಳುವಂತೆ, ಈ ಜೀವನ ಪ್ರಪಂಚವು "The world is (harmonious) well ordered, integrated entity" (ಎಲ್ಲೆಲ್ಲೂ

ಸಾಂಗತ್ಯವಿರುವ, ಸುವ್ಯವಸ್ಥಿತ ವಾಸ್ತವ ಸಂಗತಿ) ಆಗಿದೆ. ಆದರೆ ಮಾನವರ ಮೊಗವಾಡದ ಹಾಗೂ ಜೀವಿತ ಲೈಂಗಿಕಪಾತಳಿ ಮೆಚ್ಚಿರುವ ನರ(ಳ) ವರ್ಗದ ಕೃತಘ್ನತೆಯಿಂದಾಗಿ, ಈ ಜೀವನವು disintegrated: ಅಸಾಂಗತ್ಯವುಳ್ಳದ್ದು ಆಗಿದೆ.

ಇದು ನಿಜವಿದ್ದರೆ, ಜೀವನದಲ್ಲಿ 'ಅಸಾಂಗತ್ಯ'ವು ತಲೆದೋರುತ್ತಿರುವ ಎಡೆ ಯಾವುದು, ಎಂಬುದನ್ನು ಸಿದ್ಧಪಡಿಸಬೇಕಾಗುತ್ತದೆ. ಸರಿ. ಇಂದಿನ ಭಾಷೆಯೇ ಇದಕ್ಕೆ ನಿದರ್ಶನ. ಅಭಾವಾತ್ಮಕ ಭಾಷೆ–ಆಚಾರ–ವಿಚಾರಕ್ಕೇ ಸ್ವತಂತ್ರ ಅಸ್ತಿತ್ವ–ಸ್ಥಾನವು ಇಲ್ಲ. ಭಾವಾತ್ಮಕ ಜೀವನದ ಸಾಪೇಕ್ಷಿಯಾಗಿ ಅಭಾವಾತ್ಮಕ ಜೀವಿತವಿದೆ.

ಈ ಭಾಷೆ, ಹಾಗೂ ಇದರಲ್ಲಿ ಅಡಕವಿರುವ ಅರ್ಥ ಇದು ವೈಯಕ್ತಿಕ ಸ್ವರೂಪದ್ದು ಅಲ್ಲ, ವ್ಯಕ್ತಿಗಳಿಗೆ ತಮ್ಮ ಅಭಿಪ್ರಾಯ, ವಿಚಾರ, ಅನುಭವ ವ್ಯಕ್ತಪಡಿಸುವ ಹಕ್ಕು ಇದ್ದೇ ಇದೆ. ಆದರೆ ಹೀಗೆ, ವ್ಯಕ್ತವಾಗುವ ಅರ್ಥ= ವಿಚಾರವು ಆ ಭಾಷಿಕ ಸಮಷ್ಟಿಯ ಮೂಲಭೂತ ಮನು ಸಮಯದ ಆಚಾರಕ್ಕೆ ವಿಸಂಗತವಿರಕೂಡದು. ಏಕೆಂದರೆ ವ್ಯಕ್ತಿಯು ತತ್ತ್ವತಃ ಅಭಾವಾತ್ಮಕವಿದೆ. ಆ ಭಾಷಿಕ ಸಮಷ್ಟಿಯ ಸಂಪರ್ಕ, ಸಂಬಂಧದಲ್ಲೇ ಈ ಅಭಾವಾತ್ಮಕವು ಅರ್ಥಪಡೆಯಬಲ್ಲದು.

ತನ್ನ ಭಾಷಿಕ ಸಮಷ್ಟಿಯ ಅನುಸಂಧಾನದ ಸಂದರ್ಭದಿಂದ ಅಭಾವಾತ್ಮಕ ಜೀವಿತದ ವ್ಯಕ್ತಿಗೆ, ಈ ಜೀವನದಲ್ಲಿ ಸ್ಥಾನವು ಉಂಟು; ಆದಕಾರಣ ಒಂದು ಬಗೆಯಲ್ಲಿ 'ವಿಶಿಷ್ಟವ್ಯಕ್ತಿ' ಎಂಬುದು ಅಭಾವವೇ ಸ್ಥಾಯಿ ಆಗುತ್ತಿದೆ. ಆದರೆ ವ್ಯಕ್ತಿ ವೈಶಿಷ್ಟ್ಯಕ್ಕೆ ಎಂದರೆ ಅಭಾವಕ್ಕೆ ಸ್ವತಂತ್ರಸ್ಥಾನವು ಲಭಿಸುವಾಗ, ಆ ಭಾಷೆಯಲ್ಲಿ ಅಸಾಂಗತ್ಯವು ತಲೆದೊರಲೇಬೇಕು.

ಈ 'ಭಾಷೆ' ಎಂಬುದು ಆ ಭಾಷಿಕ ಸಮಷ್ಟಿಯ ಒಂದು 'ಧಾರಣ' (concept) ಸ್ವರೂಪದ್ದು ಇರುತ್ತದೆ : ಇರಬೇಕು ನಿಜ. ಆದರೆ ಆ ಸಾಮಾಜಿಕರಲ್ಲಿ ಅಸಾಂಗತ್ಯವು ಕಾಣಿಸಿಕೊಳ್ಳುವಾಗ ಆ ಭಾಷೆಯಲ್ಲಿ, ಅವರವರ ಅರ್ಥವು, ಅವರವರ ಪಾಲಿನ ಸತ್ಯ' ಎಂಬ ಗ್ರಹಿಕೆಯು ಶಿಷ್ಟಮಾನ್ಯವಾಗುವ ಅನರ್ಥವು ಕಾಣಿಸಿಕೊಳ್ಳುತ್ತಿದೆ ! ಇದನ್ನು ಇನ್ನೊಂದು ನಿಟ್ಟಿನಿಂದ ಖಚಿತಪಡಿಸಿಕೊಳ್ಳಬಹುದು.

"Concepts can never be regarded as logical derivatives of sense impressions'' ಎಂದು ಡಾ. ಐನ್ಸಟೀನ್ನ ಹೇಳುವಮಾತು ವಿಚಾರಾರ್ಹವಿದೆ. ಇನ್ನೊಂದು ಬಗೆಯಲ್ಲಿ ಈ ವಿಚಾರವನ್ನೇ ಅವರು ಹೀಗೂ ಹೇಳುತ್ತಾರೆ. "Concepts are not deduced logically from experience, nevertheless they are always connected with experience'' (pp. 104: 102). ಭಾಷೆಯನ್ನು ಕುರಿತ ಅವರ ಇನ್ನೂ ಒಂದು ಉಕ್ತಿಯೂ ಮನನೀಯವಾಗಿದೆ. "Concepts are not identical with the totality of sense impressions.'' (p-103)

ಈ ಧಾರಣ (concepts) ವೈಯಕ್ತಿಕ ಅಭಿವ್ಯಕ್ತಿಯಲ್ಲ. ಇದು ತರ್ಕಾನುಗಾಮಿಯೂ ಅಲ್ಲ. ವೈಯಕ್ತಿಕ ಇಂದ್ರಿಯಾನುಭವಗಳ ಪ್ರತಿಬಿಂಬವಲ್ಲ. ಆದರೂ ಈ ಧಾರಣ ಅನುಭವಕ್ಕೆ ಹೊರತಾದುದಲ್ಲ. ಉದಾ : 'ನರಿ' 'ನರ' 'ಮಾನವ' ಇವು ಒಬ್ಬನ ಇಂದ್ರೀಯ ಗೋಚರ ಅನುಭವದ ಚಿತ್ರವೂ ಅಲ್ಲ.

ಹಾಗಾದರೆ, ಈ ಧಾರಣ (concept) ಸಂಭವಿಸುವದು ಹೇಗೆ ? ಇದನ್ನು ಸಂಕಲ್ಪನೆ, ಪರಿಕಲ್ಪನೆ ಎಂದು ಭಾಷಾಂತರಿಸುವಲ್ಲಿ ವಾಸ್ತವ : ಸತ್ಯಕ್ಕೆ ಅಪಚಾರ ಬಗೆದಂತೆ ಆಗುತ್ತದೆ. ಏಕೆಂದರೆ, ಕ್ಲೃಪ್ > ಕಲ್ಪ, ಕಲ್ಪನೆ, ಸಂಕಲ್ಪ ಈ ಮಾತುಗಳು ಕೇವಲ ವೈಯಕ್ತಿಕ ಅರ್ಥ: = ಆಶಯ ಸೂಚಕವಾಗಿವೆ.

ಆದರೆ ಧಾರಣ = concept ಎಂಬಲ್ಲಿ (conceive, conception, concept) ಕೊಡುಕೊಳ್ಳುವ ಉಭಯ ಪಕ್ಷೀಯ ವ್ಯವಹಾರವಿದೆ. ಯಾವದೊಂದು ವ್ಯಕ್ತಿಗೆ, ಆ ಭಾಷಿಕರ ಅಮೂರ್ತರೂಪ ಸಮಷ್ಟಿಯೊಡನೆ (Social collective unconsclous) ಬರುವ ಆತ್ಮೀಯ ಸಂಪರ್ಕ ಸಂಬಂಧದ ಮೂಲಕ, ಅಭಿವ್ಯಕ್ತಿಯ ಸಂದರ್ಭದ 'ದಾರಣವು' ಶಕ್ಯವಾಗುತ್ತದೆ.

ಭಾಷೆಗೆ ಆಕಾರವನ್ನಿತ್ತ, ಆಮನೋಃ 'ವರ್ತನಃಪರಂ' ಮೂಲ ಮನುಸಮುಯುದ, ಆ ಭಾಷಿಕ ಅಮೂರ್ತ ಸಮಷ್ಟಿ (collective social unconscious) ಎಂದರೇ ಈ ಮಾನವ ಜೀವನದ ಪಾತಳಿ. ಇದಕ್ಕೆ ಪ್ರತಿಯಾಗಿ ಅಭಾವವೇ ಸ್ಥಾಯೀ ಇರುವ ಅನಿವಾರ್ಯತೆಯ ಜೀವಿತದ ಹಿನ್ನೆಲೆಯು ವ್ಯಕ್ತಿಯ ಬಾಳಿನಲ್ಲಿ ಮೊತ್ತ ಮೊದಲಲ್ಲಿ ಸಾಂಗತ್ಯವು ಇತ್ತು. ಆದರೆ ಕಾಲ

ಕ್ರಮದಲ್ಲಿ 'ಬುದ್ಧಿ'ಯು ತಲೆಯೆತ್ತಿ ಪ್ರಭಾವಶಾಲಿಯಾಗತೊಡಗಿದಂತೆ, ಅಭಾವ ಅತ್ಯಂತ ಅಭಾವರೂಪೀ ಜೀವಿತವು ಜೀವನದಿಂದ ದೂರವಾಗಿ ಸ್ವತಂತ್ರ ವಾಗತೊಡಗುತ್ತದೆ. ಆಗ ಈ ಮಾನವ ಜೀವನದೊಳಗೆ ಅಸಾಂಗತ್ಯವು ಅನಿ ವಾರ್ಯವಾಗುತ್ತದೆ. ಈ ದೃಶ್ಯವು ಮಾನವೇತಿಹಾಸದ ಸಮೀಕ್ಷೆಯಲ್ಲಿ (ಭಾರ ತೀಯ ಹಾಗೂ ಗ್ರೀಕ ಸಾಂಸ್ಕೃತಿಕ ಪರಂಪರೆಗಳ ತೌಲನಿಕ ಸಮೀಕ್ಷೆಯಲ್ಲಿ), ಎದ್ದು ಕಾಣುತ್ತಿದೆ. ಉದಾ: ವೇದದೊಳಗಿನ 'ಆಂಭೃಣೀ' ('ಸ್ಥಲ') ಕಣ್ : ತಾನೇ ಅದ್ವಿತೀಯಳು ಎನ್ನುತ್ತಾಳೆ (ಅದಿತಿ) ದಕ್ಷ, ರುದ್ರ, ವಿಷ್ಣು ನಾಮದ ದೇವರು (ಗಣ್) ತಾನೇ ಶ್ರೇಷ್ಠ ಎಂದು ನಿಗುರಿ ನಿಂತಿದ್ದಾಗಿದೆ.

ಕ

ಭಾಷೆಯು ಜನಜೀವನದ ಉಸಿರು ತಾನೆ? ಇದರೊಳಗಿನ ಅಸಾಂಗತ್ಯ ವನ್ನು ನಿದರ್ಶನಕ್ಕೆ ತರುವ ಉದಾಹರಣೆಗಳನ್ನು, ವಿವಸ್ವನ್ 'ಮನು'ವಿನ ಬಗೆಗೆ ಬರೆಯುವಾಗ ವಿವರಿಸಲಾಗಿದೆ. ಆದರೆ ಪುನರುಚ್ಚಾರವು ಇಲ್ಲಿ ಅನಿ ವಾರ್ಯವಾಗುತ್ತಿದೆ, ಪ್ರಜ್ಞೆ ಭಾಷೆಯನ್ನು ಪ್ರೇರಿಸುತ್ತದೆ. ಆದರೆ (I) 'ಪ್ರಾಣಾಃ' ವಾ ಋಷಯಃ;>ಬೃಹದಾರಣ್ಯಕ. (ಪ್ರಾಣವಿರುವ ಪ್ರಾಣಿಗಳು ಋಷಿ ಯಂತೆ !) 'ಗರ್ಭ' (ಭಗ)ಸ್ಥ ವಾಮದೇವ ಹೆಸರಿನ ಪಿಳ್ಳೆ, ಕುಣ್ಣಿ, ತಾಯಿಗೆ ಹೇಳುತ್ತದಂತೆ : "ಅಹಂ ಮನುಃ ಅಭವಂ ಸೂರ್ಯಃ ಚ ಇತಿ" (ಋ IV ೨೭.೧) (II) 'ಭಗ'ವಂತ ಎಂದರೂ ಏನು ಅರ್ಥ ? ಸ್ಥಳ (ಭಗ)ದ ಹೊರಗೆ, ಸ್ಥಾನವೇ ಇಲ್ಲದಿರುವ, ಭಗಸ್ಥವಿರುವ ಈ ಕಾಲ ಶಕ್ತಿಯು, "ಲೋಕ ಕ್ಷಯ ಕೃತ್ ಪ್ರವೃದ್ಧ ಕಾಲನು ತಾನು" ಎಂದು ಮಾತಾಡುತ್ತದಂತೆ ! (ಗೀತೆ ನೋಡು) ಭಗಸ್ಥಲಿಂಗ = ಕೃಷ್ಣಶಕ್ತಿ ಮಾತಾಡುತ್ತದೆ ಎಂದು ಸಂಬಂಧಿಸಲಾಗಿ ರುವುದನ್ನು ಈಗ ಬಯಲಿಗೆ ತರುವ ಅವಶ್ಯಕತೆ ಇದೆ.

ಭಾಷೆಯೊಳಗಿನ 'ಧಾರಣ' (concepts) ವನ್ನು ವ್ಯಕ್ತಿಗಳು ತಮ್ಮ ಸ್ವೈರ ಸಂಕಲ್ಪಶಕ್ತಿಯಿಂದ ಹೀಗೆ ಕಲ್ಪಿಸತೊಡಗಿರುವದರಿಂದ, ಇಂದು ಭಾಷೆಯು 'ವಾಕ್' ಪಾತಳಿಯಿಂದ, 'ಗೀರ್ವಾಣವಾಣಿಯ' (ಲಿಂಗಾಂಗ ಯೋಗದ) ಪಾತಳಿಯ ಮೇಲೆ ಬಂದಿದೆ; ಶಬ್ದಮಣಿದರ್ಪಣದಲ್ಲಿ ಭಾಷೆಯು 'ನಾಭಿಮೂಲದೊಳ್ ಜನಿಯಿಸುಗುಂ' ಎಂಬ ಕೇಶಿರಾಜನ ಉಕ್ತಿ; 'ಮಾತು ಜ್ಯೋತಿರ್ಲಿಂಗ ಶಕ್ತಿ' ಎಂಬ ವಚನ ಇದಕ್ಕೆ ಸಾಕ್ಷಿ.

(ಡ)

ಈ ಬಗೆಯಲ್ಲಿ ಮಾನವ ಜೀವನದಲ್ಲಿ ಅಸಾಂಗತ್ಯದ, ವಿಕೃತಿಯ ವಿವಿಧ ಪ್ರಕಾರಗಳು ತಲೆದೋರಲು ಕಾರಣವು ಏನು ? ಬಾಳಿನಲ್ಲಿ ಕಾಣಿಸಿಕೊಳ್ಳು ತ್ತಿರುವ ಈ 'ಅಸಾಂಗತ್ಯ' ಪ್ರೇರಿಸುವ ಶಕ್ತಿಯು ಯಾವುದು ?

ಇಂದಿನ ವೇದೋಪನಿಷತ್ತುಗಳು ಮತ್ತು 'ಭಗವತ್ ಗೀತೆ ಯಂತಹ ಶ್ರದ್ಧಾಸ್ಥಾನವನ್ನು ರೂಪಿಸುವ ಗ್ರಂಥಗಳು, ನಂಬಹಚ್ಚಿ ರುವ ಸುಳ್ಳುಗಳೇ ಈ ಮಾನವರನ್ನು ನರ (ಳ) ರ ಹಂತಕ್ಕೆ ತಳ್ಳುತ್ತಿವೆ.

ವೇದದ ಈ ಸುಳ್ಳಿನ ಒಂದು ಮಾದರಿ ಪರೀಕ್ಷಿಸಿ, ಇದರ ಖೊಟ್ಟಿ ತನವನ್ನು ಖಚಿತಪಡಿಸಿಕೊಳ್ಳಬಹುದಾಗಿದೆ.

೧) ಸೂರ್ಯ (ಪ್ರಜ್ಞಾ) ಶಕ್ತಿಯನ್ನು, ಚಾಂದ್ರ (ಪ್ರಾಣಲಿಂಗ ಚೇತ ಸದ) ಶಕ್ತಿಯು ಪಾತಳಿಯ ಮೇಲೆ 'ಆದಿತ್ಯ'ನ ಹಂತಕ್ಕೆ ತಂದಿರುವ ಈ ಮಾಟ ನೋಡಿಕೊಳ್ಳಿ.

ಆದಿತ್ಯನನ್ನು ಸೂರ್ಯನೆಂದು ನಂಬಿಸಲಾಗಿದೆ. ಡಾ. ರಾಧಾಕೃಷ್ಣರಂತ ಹರು ಉಪನಿಷತ್ತುಗಳಲ್ಲಿ ಬರುವ 'ಆದಿತ್ಯ' ಪದಕ್ಕೆ 'ಸೂರ್ಯ' ಎಂದು ಅರ್ಥ ಹೇಳುತ್ತಾರೆ. (ವೈವಸ್ವತ–ಪು. ೧೫೦–೨).

೨) ಚಾಂದ್ರ (ಪ್ರಾಣಲಿಂಗ ಪಾತಳಿ) ಶಕ್ತಿಯನ್ನು ಸೂರ್ಯ (ಪ್ರಜ್ಞಾ) ಶಕ್ತಿಯ ಹಂತಕ್ಕೆ ಏರಿಸಲಾಗಿದೆ.

ಸಮುದ್ರಮಂಥನದಲ್ಲಿ ಜಲದೊಳಗಿಂದ ಹೊರಬಂದವನು ಚಂದ್ರನು ತಾನೆ ? ಆದರೆ ಸಲಿಲ (ಶರೀರ) ರೂಪೀ ಅದಿತಿಯು 'ಮಾರ್ತಾಂಡ ನಾಮಾನಂ ಸೂರ್ಯಂ' ಹಡೆದಳು, ಎಂದು ಈ ವೇದ ನಂಬಿಸಿದೆ ! (X ೭೨, ೮, ೯.)

ಹಾಗಾದರೆ ಇದರಿಂದ ಆದ ಹಾನಿಯ ಸ್ವರೂಪವೇನು ? ಜೀವನ= ಜೀವಿತ ಈ ಭೇದ ನಷ್ಟವಾಗಿದೆ: ಸ್ಥಳ–ಕಾಲದ ಆಚೆಗಿನ ಪಾತಳಿಯ ನಿನ್ನೆ– ಇಂದುಗಳು ಆಗಾಮಿ ನಾಳೆಗಳತ್ತ ಅವ್ಯಾಹತವಾಗಿ ಸಾಗುವ ಜೀವನವನ್ನು : (ಭಾವಾತ್ಮಕ, ಅನುಭವಾತ್ಮಕ ಅಂತಃಸಂಗತಿಯುಕ್ತ ಅರ್ಥ = ವಿಚಾರ ರೂಪ ಪ್ರಕಾಶತತ್ತ್ವದ ಬಾಳದಾರಿಯನ್ನು) ಬಯಲು–ನಿರ್ವಲಯ ಹಂತಕ್ಕೆ ತಂದಿ ದ್ದಾಗಿದೆ. ಕೇವಲ ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ)

ರೂಪ ಈ ವಿಭಾಗ ದ್ವಯದ ಎಂದರೆ ಪಿಂಡ–ಬ್ರಹ್ಮಾಂಡೈಕ್ಯವೇ ಪರಮಸಿದ್ಧಿ ಎಂಬ ಗ್ರಹಿಕೆಯು ಜೀವಿತದ ಪಾತಳಿಗೆ ಈ ಜೀವನವನ್ನು ತಂದು ನಿಲ್ಲಿಸಿದ್ದಾಗಿದೆ.

ಈ ಅಸಾಂಗತ್ಯವು ಸಂಭವಿಸುತ್ತಿರುವ ಎಡೆಯು ಈ ವಿಚಾರವನ್ನೇ ಇನ್ನೂ ಒಂದು ಬಗೆಯಿಂದ ಹೀಗೆ ಹೇಳಬಹುದು.

'ಕಾಲಾಯ ತಸ್ಮೈ ನಮಃ !' ಕಾಲಶಕ್ತಿಯೇ ಈ ಪ್ರಪಂಚದ ಏನೆಲ್ಲ ಆಗು ಹೋಗುಗಳ ಆದಿ ಕಾರಣ, ಎಂಬ ನಂಬುಗೆ, ಭಾರತೀಯರಲ್ಲಿ ಎಂದಿನಿಂದಲೇ ಇದೆ. ಆದರೆ ನಾವು ಈಗ ಪೂಜಿಸುತ್ತಿರುವದು ಭಾವಾತ್ಮಕ ಜೀವನ ಪ್ರೇರಕನಾದ ಕಾಲ ಶಕ್ತಿಯನ್ನಲ್ಲ ! ಅಭಾವಾತ್ಮಕ ಜೀವಿತ ಪ್ರಚೋದಕ ಯೋನಿಲಿಂಗರೂಪೀ 'ಮೃತ್ಯುಸ್ವರೂಪೀ' ಚಾಂದ್ರ ಶಕ್ತಿಯನ್ನು = 'ಕರಿಗಾಲ' ಕೃಷ್ಣ = ರುದ್ರಶಕ್ತಿಯನ್ನು ನಾವು ಇಂದು ಆರಾಧಿಸುತ್ತಿದ್ದೇವೆ.

ಈ ಬಾಳಿನಲ್ಲಿ ಅಸಾಂಗತ್ಯವು ಉಂಟಾಗುತ್ತಿರುವ ಎಡೆಯು ಇಲ್ಲಿಯೇ ಇದೆ; 'ಕಪಟ ನಾಟಕ ಸೂತ್ರಧಾರಿ' ಎಂಬ ಪಾತ್ರ ಸೃಷ್ಟಿಸಿರುವ ಈ 'ಕವಿ'ಯ ಮೋಸವು ಇಲ್ಲಿ ಬಯಲಿಗೆ ಬರುತ್ತಿದೆ.

ಈ ಸರ್ವಸಂಹಾರಕ 'ಕಾಲನು' ತಾನು ಲೋಕಕ್ಷಯಕೃತ್ ಪ್ರವೃದ್ಧ ಕಾಲನಾಗಿದ್ದೇನೆ, ಎಂದು ಈ 'ಭಗ'ವಂತನು 'ಭಗ'–ವತ್ ಗೀತೆಯಲ್ಲಿ ಹೇಳಿದ್ದಾನೆ. ಆದರೆ ಈ ಭಗ (ಗರ್ಭ)ಸ್ಥ 'ಭಗ–ವಂತ' ಮಾತಾಡುವ ಬಾಯಿ ಯಾವುದು ? 'ಗರ್ಭಸ್ಥ ವಾಮದೇವ' ಮಾತಾಡಿದನು, ಎಂಬ ಮೋಸ ವೇದದಲ್ಲೇ ಇದೆ ! (IV ಮಂಡಲ) 'ಭಗ–ಸ್ಥ' ದೇವನು ಮಾತಾಡಿದ್ದು, 'ಪಂಚಮದೇವ' ಎಂಬ ಮಹಾಭಾರತದಲ್ಲಿ ಇದೆ ! ಈ ಎರಡೂ ಮಾಟ: ಮೋಸದೊಳಗಿನ ಅಸಂಗತಿಯು ಹೃದ್ಯವಿದೆ !

ಈ ಕಾ(ಳ)ಲ ಶಕ್ತಿಯನ್ನು 'ಕಾಲ–ಕಾಲೇಶ್ವರ' ಎಂದೂ ಹೇಳುವ ವಾಡಿಕೆಯು ಉಂಟು ! ಇದರ ಅರ್ಥವು ಏನು ? ಇಲ್ಲಿ ಎರಡು ಕಾಲಗಳ ಸೂಚನೆಯು ಉಂಟು ? ಒಬ್ಬ ಕಾಲನು ತಾನು ಇನ್ನೊಬ್ಬ ಕಾಲ(ನ) ಈಶ್ವರ ಎಂಬ ಅರ್ಥವು ಇಲ್ಲಿ ಉಂಟಷ್ಟೆ ? 'ಗಂಡರ ಗಂಡ' ತಾನು, ಎಂಬೀ ಬಗೆಯ ಹುಂಬುತನದ ಬಿರುದಾವಳಿಗಳು ಪ್ರಾಚೀನ ರಾಜರ ಸ್ಪರ್ಧೆಯಲ್ಲಿ ರೂಢಿಯಲ್ಲಿ ಇದ್ದವು. ಆ ಬಗೆಯ ಸ್ಪರ್ಧಾಭಾವವೇ ಈ 'ಕಾಲ–ಕಾಲೇಶ್ವರ'

ಎಂಬಲ್ಲೂ ಉಂಟು. ಈ 'ಕಾಲ ಕಾಲೇಶ್ವರ'ನಿಗೆ 'ಮಹಾನ್ ಕಾಲ' ಎಂದೂ ಕರೆವ ಸಂಪ್ರದಾಯವೂ ಇದೆ.

ಇವೆರಡೂ ಬಿರುದುಗಳು ಸ್ಪರ್ಧಾಸೂಚಕವಿರುವುದು ನಿಶ್ಚಿತ. ತಮ್ಮ ದೇವನು, ಕಾಲಕಾಲೇಶ್ವರನು 'ಮಹಾನ್ ಕಾಲನು' ಎಂಬಲ್ಲಿ ಪರ್ಯಾಯ ದಿಂದ ಇನ್ನೊಂದು 'ಕಾಲ'ಶಕ್ತಿ 'ಮಹಾನ್' ಅಲ್ಲ; ಅದು ಅಲ್ಪ–ಕ್ಷುದ್ರವಿದೆ, ಎಂದು ವ್ಯಂಗ್ಯವಾಗಿ ಸೂಚಿಸಲಾಗುತ್ತಿದೆ !

ಇದು ನಿಜವಿದ್ದರೆ, ಇಲ್ಲಿ ಅಭಿಪ್ರೇತವಿರುವ ಅಲ್ಪ ಕ್ಷುದ್ರವಾದ ಇನ್ನೊಂದು ಕಾಲಶಕ್ತಿಯು ಯಾವುದು ? ಇದರ ಸ್ವರೂಪವೇನು ? ಇದನ್ನು ನಿರ್ದಿಷ್ಟಪಡಿಸಿ ಅರಿಯಲು ಶಕ್ಯವೇ ? ಇಂತಹ ಪ್ರಮಾಣಗಳು ಎಲ್ಲಿವೆ ?

'ಲೋಕಕ್ಷಯಕೃತ್ ಪ್ರವೃದ್ಧ' ಕಾಲನು, ತಾನು, ಕೃಷ್ಣಕಾರಸ್ಥಾನೀ 'ಭಗವಂತ' ನೆಂಬವನು 'ಕೊಂದ' ಅಥವಾ ಹೇಳಹೆಸರಿಲ್ಲದಂತೆ ಮಾಡಿರುವ ಈ ಇನ್ನೊಬ್ಬ 'ಕಾಲನು' ಯಮನು, ವೈವಸ್ವತನು ! "ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನ್ ಅಹಂ" ಎಂದಿರುವಲ್ಲಿ, ಈ ಕರಿಯ ಕಾಲನು, ಚಂದ್ರನು, ವೈವ ಈ ಸ್ವತ = ಸೂರ್ಯನನ್ನು ಇಲ್ಲವಾಗಿಸಿರುವ ಇಲ್ಲಿ ಅಭಿಚಾರ ಕೃತ್ಯವು ಅಭಿಪ್ರೇತವಿದೆ. ಈತನು ಯಮ = ಧರ್ಮನು ! ಈ ಸೌರ ಮೃತ್ಯು ದೇವನನ್ನು 'ಧರ್ಮ' ಎಂದುದು ನಿಷ್ಕಾರಣವಲ್ಲ. 'ಧರ್ಮ' ಎಂದರೆ 'ವಿಶ್ವನಿಯಮ'. ಈ ಧರ್ಮವನ್ನು ವೈವಸ್ವತ ಮನುವಿನ ವಿವರಣೆಯಲ್ಲಿ, ಗ್ರಂಥದ ಉದ್ದಕ್ಕೂ ಬಗೆಬಗೆಯಿಂದ ಹೇಳಿದ್ದಾಗಿದೆ.

ಇಲ್ಲಿ ಸೋಜಿಗವೆಂದರೆ, ಯಮ (ನಿ)ಯಮ ರೂಪಿ ಈ ಮೃತ್ಯು ಶಕ್ತಿಯು, ನಿಷ್ಕಾರಣವಾಗಿ ನಿರ್‌ನಿಮಿತ್ತದಿಂದ ಯಾರನ್ನೂ ಹಿಂಸಿಸಲಾರದು ! ಈ ಹಿನ್ನೆಲೆಯಲ್ಲಿ 'ಯಮ'–ನಿಯಮ ಬದ್ಧ ಧರ್ಮಕ್ಕೆ ವಿಶ್ವನಿಯಮಕ್ಕೆ ಅನುಸರಿಸಿ ಶಿಕ್ಷಿಸುವ–ಸಂಹರಿಸುವ 'ಯಮ' = ಧರ್ಮನ ಉಚ್ಚಮಟ್ಟವು ಅರಿಕೆಗೆ ಬರುತ್ತದೆ. ಆದರೆ ಈ ವೈವಸ್ವತ ವಿರೋಧೀ 'ಭಗ'ವಂತ ಹೆಸರಿನ ವಿರೋಧೀ ಕಾಲಶಕ್ತಿಯ ಕ್ಷುದ್ರತನ ನೀಚ ವೃತ್ತಿ ಬೆಳಕಿಗೆ ಬರುತ್ತಿದೆ. ಈ ಕಾಲನು ನ್ಯಾಯ–ಅನ್ಯಾಯದ ಎಗ್ಗಿಲ್ಲದೆ, ಏನೆಲ್ಲವನ್ನೂ ನಾಶಮಾಡಲು ನಿಗುರಿ ನಿಂತಿದ್ದೇನೆ, ಎಂದು ಹೇಳುವ ಈ ಕರಿಗಾಲ ಕೃಷ್ಣ ಶಕ್ತಿಯು 'ದೇವರು' ಹೆಸರಿಗೂ ಅನರ್ಹವಿದೆ.

ಇವನು ವಿವೇಕರಹಿತ, ದುಷ್ಟ, ಸ್ವಚ್ಛಂದೀ, ಕೇಡಾಳಿ ಆಗಿದ್ದಾನೆ. ಈ ಲಿಂಗ ರೂಪೀ ಕಾಲಶಕ್ತಿ ಎಂದು ಸ್ಪಷ್ಟವಾಗಿ ಇಲ್ಲಿ ಹೊರವಡುತ್ತಿದೆ!

ಈ ಸೌರ ಯಮ–ಧರ್ಮನನ್ನೂ ಚಾಂದ್ರನನ್ನಾಗಿಸಿದ್ದಾಗಿದೆ. ಕೋಣ ನನ್ನೇರಿರುವನೆಂಬ ಯಮನು ಚಾಂದ್ರಲಿಂಗ ಶಕ್ತಿ! ಈ ಯಮನು 'ಯಮಿ' ಎಂಬ ತನ್ನ ಸೋದರಿಯ ಸಂಗಾತಿ ಎಂದು ಈತನನ್ನು ಭ್ರಷ್ಟಾಚಾರಿಯಾಗಿಸುವ ಪ್ರಯತ್ನವಾಗಿದೆ.

ಹೀಗೆ ಭಾರತೀಯ ಪೂರ್ವಪರಂಪರೆಯಲ್ಲಿ 'ಮೃತ್ಯು' ತತ್ತ್ವಗಳು ಎರಡು ಇವೆ; ೧) 'ಯಮ : ಧರ್ಮ' ಹೆಸರಿನ ವೈವಸ್ವತ ಕಾಲಶಕ್ತಿ, ಪ್ರಕಾಶ ತತ್ತ್ವದ ಉಪಾಸನೆಯಲ್ಲಿ, ಸಾಕ್ರೇಟಿಸನಂತಹ ಸ್ವಾಗತಿಸುವ ಆ ಮೃತ್ಯು ತತ್ತ್ವವು ಪ್ರಕಾಶ ರೂಪವಿರುತ್ತದೆ. ೨) ಇನ್ನೊಂದು ಬಗೆಯ ಕಾಲಶಕ್ತಿ: ಪ್ರಾಣಲಿಂಗ ಪಾತಳಿಯ ಸ್ವೈರಾಚಾರಗಳ ಫಲಿತವಾಗಿದೆ.

ಆರಾಧಿಸುವ ದೇವತಾ ಸ್ವರೂಪದ ಮೇಲಿಂದ ಆ ಭಕ್ತವರ್ಗದ ಸಾಂಸ್ಕೃತಿಕ ಜೀವನದ ಅಥವಾ ಜೀವಿತದ ಮಟ್ಟವು ಬಯಲಿಗೆ ಬರುತ್ತದೆ. ಜೀವನ ಪೂಜಕರು ಯಮಧರ್ಮನ ಭಕ್ತರು. ಜೀವಿತದ ಉಪಾಸಕರು ಲೈಂಗಿಕ ಪಾತಳಿಯ ಮೃತ್ಯು ಶಕ್ತಿಯ ಭಜಕರು. ಇಂದು ಭಾರತೀಯರಿಗೆ ಗೀತೆಯೇ ರಾಷ್ಟ್ರೀಯ ಮಹತ್ತ್ವದ ಬೈಬಲ್ಲನ್ನು ಮೀರಿಸುವ ಪವಿತ್ರ ಗ್ರಂಥ 'ಕರಿಗಾಲ' ಕೃಷ್ಣ (ವಿಷ್ಣು–ರುದ್ರ), ಭಾರತೀಯರ ಉಪಾಸ್ಯ ದೈವತವಾಗಿದೆ!

ಈ ಒಂದು ನಿಷ್ಕರ್ಷವೂ ಸಾಕು. ಭಾರತದಲ್ಲಿ, ಇಂದು ತಾಂಡವ ವಾಡುತ್ತಿರುವ ಭ್ರಷ್ಟಾಚಾರ, ಲಂಚಗುಳಿತನ, ಅನೈತಿಕ ವ್ಯವಹಾರ ಇತ್ಯಾದಿ ಸ್ವರೂಪದ ದುಷ್ಪ್ರವೃತ್ತಿಗಳ ಪ್ರೇರಣಾ ಕೇಂದ್ರವು ಯಾವುದು, ಎಲ್ಲಿದೆ, ಎಂಬು ದನ್ನು ಖಚಿತಪಡಿಸಿಕೊಳ್ಳಲು.

ಈ ಮಾತು ಪ್ರಾರಂಭವಾದದ್ದು ಕಾಲಾಯ ತಸ್ಮೈನಮಃ ಎಂಬ ನಮನದ ಸಂದರ್ಭದಿಂದ. ಭರ್ತೃಹರಿಯು ವಂದಿಸಿದ ಈ 'ಕಾಲನು', ವಿವೇಕಯುಕ್ತ ಧರ್ಮ=ನಿಯಮಗಳ ಪಾತಳಿಯ 'ಯಮ'ನು ಅಲ್ಲ! ಈ ಭರ್ತೃ ಹರಿಗೆ ಅವಿವೇಕೀ ಕೃಷ್ಣ ಕಾಲ, ಮಾತ್ರ ಗೊತ್ತಿತ್ತು. ಪ್ರಕಾಶ ತತ್ತ್ವದ ವೈವ ಸ್ವತಃ ಯಮ ಸ್ವರೂಪೀ ಕಾಲನೂ ಇದ್ದಾನೆ. ಇವರು ಇಬ್ಬರು ಇದ್ದಾರೆ, ಎಂಬ ಪ್ರಜ್ಞೆ, ಭರ್ತೃಹರೀಕಾಲದಲ್ಲಿ ಇರುವ ಶಕ್ಯತೆಯು ಇಲ್ಲ.

ಇಂದಿನ ವೇದದಲ್ಲಿಯೇ ವೈವಸ್ವತ=ಯಮ ಆದಿತ್ಯನಾದದ್ದೂ ಉಂಟು, 'ಮನು' ಜರನ್ನು ನರ(ಳ)ರನ್ನಾಗಿಸಲು, ಇವರ ಅಂತರ್ಯಾಮಿ ಮನುವೈವಸ್ವತ ನನ್ನು 'ಭಗ'ವತ್‌ಗೀತೆಯ 'ಭಗ'ವಂತನು ಎಂದೋ ಮಾನವರ ಕಣ್ಮರೆಯಾಗಿ ಸಿದ್ದಾನೆ! ಈ ಮಾನವರ ಅಂತರ್ಯಾಮಿ ಮನುಃ ವೈವಸ್ವತನ ಪಟ್ಟವನ್ನು ಇಂದು ಬುದ್ಧಿ=ಬುದ್ಧಿಯ ಅಧೀನ ಮನಸ್ಸು ಆಕ್ರಮಿಸಿದೆ! 'ಆ-ತ್ಮನ್' ಭಗವಂತ, ಮನುವಿಗೂ ಮಿಗಿಲಂತೆ!

ಈ ಮಾನವರ ಜೀವನದಲ್ಲಿ ಅಸಾಂಗತ್ಯವು ಉಂಟಾಗಿರುವ ಎಡೆ ಹೀಗೆ ಇಲ್ಲಿ ಇದೆ. ೧) ಮನು ವೈವಸ್ವತನಿಂದ (ಸೌರಶಕ್ತಿಯಿಂದ) ಪ್ರೇರಿತವಿರುವ ನಿನ್ನೆ-ಇಂದು ನಾಳೆಗಳ ಸ್ವರೂಪದ ಪ್ರಕಾಶರೂಪ ಕಾಲಗತಿಯನ್ನು ಆರಾಧಿಸು ವುದನ್ನು ಬಿಟ್ಟು ಈ ಮಾನವರೆಂಬ ಪ್ರಾಣಿಗಳು ಪಿಂಡ ಬ್ರಹ್ಮಾಂಡದ ಐಕ್ಯದ-ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಈ ವಿಭಾಗದ್ವಯದ ಸಂದರ್ಭದ ಕತ್ತಲಿನಿಂದ ಆವೃತ ವೃತ್ತಾಕೃತಿಯ [೦] ಕಾಲಶಕ್ತಿಯು ನಮಗೆ ಇಂದು ಪೂಜ್ಯವಾಗಿದೆ! ಶೂನ್ಯ [೦] ಸಿದ್ಧಿಯೇ ಬಾಳಗುರಿ ಎನಿಸಿದೆ!

'ಮನು'ಜರನ್ನು ರೂಪಿಸುವ 'ಕಾಲ' ಕಡೆಗಣಿಸಿ ನರ(ಳ) ಪ್ರಾಣಿಗಳನ್ನು ಪ್ರೇರಿಸುವ ಕಾಲಶಕ್ತಿಯನ್ನು ಪೂಜಿಸುತ್ತಿದ್ದೇವೆ. ನೇರ-ಸರಳಗತಿಯ ಪ್ರಕಾಶ ತತ್ತ್ವ ಬಿಟ್ಟು, ವಕ್ರ-ವೃತ್ತಾಕೃತಿಯ ಕತ್ತಲು ಗವಿಯ ಕಾಲವನ್ನು ಪೂಜಿಸುತ್ತಿದ್ದೇವೆ. "ವಕ್ರೋಕ್ತಿಃ ಏವ ಆತ್ಮಾ ಕಾವ್ಯಸ್ಯ!" ಎಂಬ ಈ ಉಕ್ತಿ ಸಾಹಿತ್ಯಿಕರನ್ನು 'ಕರಿಗಾಲ ಲಿಂಗಪೂಜೆಯ' ದಿಕ್ಕಿನಲ್ಲಿ ತಳ್ಳುತ್ತಿದೆ.

ಈ ವಿಚಾರಗಳ ಆಶಯಕ್ಕೆ ಆಧಾರ ಭೂತ ಆಕೃತಿಗಳು ಸನಾತನ ಇವೆ. ಪ್ರಸ್ತುತ ಈ ಸೂತ್ರವು ಕಾಲಗತಿ ಶಕ್ತಿಯ ಆಶಯ: ಅರ್ಥ ಗ್ರಹಣಕ್ಕೂ ಪ್ರಯೋಜನಕಾರಿಯಾಗಲಿದೆ.

ಈ ಮೊದಲು ವಿವರಿಸಿರುವ ಉಭಯ ಸ್ವರೂಪ ಕಾಲಗಳಲ್ಲಿ ೧) ಮನು=ವೈವಸ್ವತ (ಸೌರ ಶಕ್ತಿಯಿಂದ) ಪ್ರಚೋದಿತ ಕಾಲ ಒಂದು ಉಂಟು.

ಇದು, ಪ್ರಕಾಶ ತತ್ತ್ವ. ಬಾಳಿನಲ್ಲಿ ಹುದುಗಿರುವ ಅಂತಃಸಂಗತಿಯುಕ್ತ (immanent) ಅರ್ಥ=ವಿಚಾರಗಳ ಪ್ರಜ್ಞೆಯಿಂದ ಪ್ರಚೋದಿತ ಕಾಲ. ಈ 'ಮನು'ಜನಿಗೆ ಆಗಾಮಿ 'ನಾಳೆ' ಗಳತ್ತ ಮುನ್‌ನಡೆವ ಪ್ರೇರಣೆಯು ಈ ವೈವಸ್ವತನಿಂದ ದೊರೆಯುತ್ತದೆ. 'ಪ್ರಜ್ಞಾನೇತ್ರೋ ಲೋಕಃ' ಎಂದರೆ, ಇದು

ಮಾನವ ಧರ್ಮದ ಮನುಜರ ಲೋಕ. ಇದು ನಿನ್ನೆ-ಇಂದುಗಳ ರೂಪದಲ್ಲಿ ಬರಲಿರುವ 'ನಾಳೆ'ಗಳತ್ತ ನೇರ ಸಾಗಬಲ್ಲುದು. ಈ ಸರಲಗತಿಯ ಪ್ರಕಾಶ ತತ್ತ್ವದ ಕಾಲವು 'ಮನು'ಜರನ್ನು ರೂಪಿಸುವ, ಪ್ರಚೋದಿಸುವ ಅಂತಶಕ್ತಿ ಯುಳ್ಳದ್ದು ಆಗಿದೆ. ಆದರೆ ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಈ ವಿಭಾಗದ್ವಯದ (ಕ್ರಿಯೆ-ಪ್ರತಿಕ್ರಿಯೆಗಳ ಸಂದರ್ಭದಿಂದ ಉಂಟಾಗುವ) 'ಗತಿ'ಯು ನಿತ್ಯವಾಗಿ ವೃತ್ತಾಕೃತಿಯ [೦] ಕತ್ತಲಿನ ಸ್ವರೂಪದ್ದೇ ಇರಬಲ್ಲದು. ಸ್ಥಲ (ದೇಹ) = ಬಯಲು = ಅಂತರಿಕ್ಷ, ಇದಕ್ಕೆ ಸ್ವಂತ ಪ್ರಕಾಶವಿಲ್ಲ!

ಪುರಾತನರು, ಇದನ್ನು ಕತ್ತಲೆಯ ಕಾಲ ಎಂದಿದ್ದಾರೆ. ಈ ವೃತ್ತಾ ಕೃತಿಯ ಗತಿಯಿಂದ ಉಂಟಾಗುವ ಈ ಲೋಕವನ್ನು ಪುರಾತನರು ಅಂಧಂ ತಮಸ್ಸಿನ [೦] ಲೋಕ ಎಂದಿದ್ದಾರೆ. ಭಾರತೀಯ ಪುರಾತನರು 'ಛಾಯಾ ಭಗವತಿ' (=ದುರ್ಗಾ-ಕಾಲಿ) ಎಂದು ಹೆಸರಿಸುವ ಕರಿಮಾಯಿಯ ಲೋಕ; ಇದು. ಇದನ್ನು 'ಮೃತ್ಯುವಿನಿಂದ ಆವೃತ ಲೋಕ' ಎಂದೂ ಉಪನಿ ಷತ್ತು ಹೇಳುತ್ತದೆ. ಪಾಶ್ಚಾತ್ಯರಲ್ಲಿ ಪ್ಲೇಟೋ ವರ್ಣಿಸಿರುವ ಗವಿ ಶ್ವಾಪ ದಾದಿ (ಪಶುಗಳ ವಾಸಸ್ಥಾನ) ಅಥವಾ 'ಗುಹೆ' (ಯತಿಮುನಿಗಳು ನರ(ಳ) ಸಂಪ್ರದಾಯದ ಗುರುವರ್ಗವು ಇರುವ ಎಡೆ) ಎಂದರೂ ಈ ಕತ್ತಲಿನ= ಜೀವಿತದ [೦] ಲೋಕವೇ ಸರಿ.

ಪ್ರಜ್ಞೆ-ಉಪಜ್ಞೆ ಪ್ರೇರಿಸುವ ಕಾಲಗತಿ, ಪ್ರಕಾಶರೂಪವಿರುವಂತೆ, ಪ್ರಾಣಲಿಂಗದ ಅಂಗವಾದ ಚಿತ್‌ಶಕ್ತಿ ಅಥವಾ ಬುದ್ಧಿಯು ಪ್ರೇರಿಸುವ ಕಾಲವು ಕತ್ತಲು ಗವಿಯತ್ತ ತಳ್ಳಿಕೊಂಡೊಯ್ಯುವುದು ನಿಶ್ಚಿತವಿದೆ.

ಆಕೃತಿ ಮತ್ತು ಆಶಯ ಇವೆರಡರಲ್ಲಿ ಇರುವ ಅನ್ಯೋನ್ಯವು, ಆ ಉಭಯ 'ಕಾಲ'ಗಳ ಅರ್ಥಗ್ರಹಣಕ್ಕೂ ಉಪಕಾರಕವಿದೆ.

ಭಾರತೀಯರು, ಇಂದು ಭ್ರಷ್ಟಾಚಾರ, ಅನೈತಿಕ ವ್ಯವಹಾರ ಇವು ತಾಂಡವವಾಡುತ್ತಿರುವುದನ್ನು ಕಾಣುತ್ತಿರಲು ಕಾರಣವೇನು? ಎಂಬುದನ್ನು ಹುಡುಕಲು ದೂರ ಹೋಗಬೇಕಾಗಿಲ್ಲ. ಅದಿತಿ ಪುತ್ರ=ಆದಿತ್ಯನೆಂಬ ವಿಷ್ಣುವು ವೇದವೇ ಹೇಳುತ್ತಿರುವಂತೆ ಅಧಿಪತಿಯೂ ಆಗುತ್ತಾನೆ. ಇಂತಹ ಶಾಯ್ಗುಂಡ, ಸೋದರೀ ಮಿಂಡರೂಪ, ದೇವರನ್ನು ನಾವು ಭಜಿಸುತ್ತಿದ್ದೇವೆ. ಅಲ್ಲದೆ ಕರಿ

ಗಾಲ ಕೃಷ್ಣ–ವಿಷ್ಣುರೂಪ ಕಾಲಶಕ್ತಿಯನ್ನು ಪೂಜಿಸುತ್ತಿರುವಲ್ಲಿಯೇ ಆಪತ್ತು ಗಳಿಗೆ, ತುರ್ತು ಪರಿಸ್ಥಿತಿಗೆ ನಾವು ಆಮಂತ್ರಿಸುತ್ತಿದ್ದೇವೆ, ಎಂಬುದನ್ನು ಸ್ಮರಿಸಿ ಕೊಂಡರೂ ಸಾಕು, ಇಂದಿನ ವಸ್ತುಸ್ಥಿತಿಯ ಅರ್ಥವಾಗಲು. ಕತ್ತಲಿಂದ ಆವೃತವಿರುವ ಪ್ರಾಣಲಿಂಗ ಪ್ರಚೋದಕ ಕಾಲದ ಪರಿಣಾಮ ಇದಕ್ಕಿಂತ ಬೇರೆ ಆಗಲು ಶಕ್ಯವಿಲ್ಲ.

ಭಾರತವು ಮಾತ್ರವಲ್ಲ, ಪ್ರಪಂಚವೇ ಪ್ರಳಯದ ಅಂಚಿನಲ್ಲಿ ನಿಂತಿದೆ ಯಲ್ಲ? ಎಂಬ ಪ್ರಶ್ನೆಯ ಉತ್ತರವೂ ಇಲ್ಲಿಯೇ ಇದೆ. ಇಂದು ಪ್ರಪಂಚದ ಮೇಲೆ ಪ್ರಭಾವ ಬೀರುತ್ತಿರುವ ಧರ್ಮಪಂಥಗಳು ಯಾವವು? ವ್ಯಾಲ್ಲಾಸನು ಕಂಡ 'missing link' ವಾನರಬಂಧು ನರ(ಳ) ಸಂಪ್ರದಾಯಗಳ ಗುರು ವರ್ಗವು ಇಂದು ಲೋಕ ಪೂಜ್ಯವಾಗಿದೆ!

ಪ್ರಪಂಚದ ಮೇಲಣ ಈ ಭಗ–ವಂತ ಪಂಥಗಳು ಮಾನವರ ಪ್ರಜ್ಞೆ ಯನ್ನು ಸ್ಥಿತಿ–ಸ್ಥಗಿತಗೊಳಿಸಿ, ಆ ಸ್ಥಾನದಲ್ಲಿ 'ಬುದ್ಧಿಯನ್ನು ಸ್ಥಾಪಿಸಿವೆ. ಬುಧನ ಬುದ್ಧನ–ಬುದ್ಧಿಯ ಈ ಜಾತಕವನ್ನು ಸಮೀಕ್ಷಿಸಿದರೆ, ಮಾನವೇತಿ ಹಾಸಕ್ಕೆ ದೊರೆತಿರುವ ಹೊಸತಿರುವಿನ (೧) ಅರ್ಥವು ಸ್ಪಷ್ಟವಾಗಲಿದೆ.

# ಪರಿವಿಡಿ

**ಅರಿಕೆ** ಪುಟ ೧–೫

ಪುಣ್ಯಶ್ಲೋಕ ವೈವಸ್ವತನೇ ಆದ್ಯನು, ಮಾನವ ಸಂಸ್ಕೃತಿಗೆ;–ಮನು–ಜ ಸ್ವಭಾವಕ್ಕೆ ಅಂತರ್–ವಿಸಂಗತಿ ಸಲ್ಲದು.—ಇದು ನರ(ಳ) ಸ್ವಭಾವ.—ಐನ್ಸ ಟನ್ನರ ನಿಷ್ಠೆ–ಅರಿತ ಸಂಗತಿ. ಸ್ಥಾಯಿೞ—ಭಾವಾತ್ಮಕ ಜೀವನವು, ಅಭಾವಾತ್ಮಕ ಜೀವಿತಕ್ಕೆ ಅಧೀನವಿರಬೇಕೆ ?— ಅಥವಾ ಅಭಾವಾತ್ಮಕ ಜೀವಿತವು, ಅಭಾವಾತ್ಮಕ ಜೀವನಕ್ಕೆಸಾಪೇಕ್ಷವಿರಬೇಕೆ?– ವ್ಯಾಲ್ಲಾಸನು ಕಂಡ Missing Link = ಇಂದಿನ ಪ್ರಾಣೋಪಾಸಕ ಅಭಾವವೇ ಸ್ಥಾಯಿೞ ಇರುವ ಮೋಕ್ಷ ಗಾಮಿೞ ವಿರಕ್ತಪಂಥೀಯರ ಪುರಾತನರದು.—ಆ 'ಅಸು'–ರ ಪಂಥದ ಇಂದಿನ ಉತ್ತರಾಧಿಕಾರಿ,–ಎಂದರೆ ನಾನಾ ನಾಮಾಂತರಗಳ ನರ(ಳ) ಸಂಪ್ರದಾಯ ಗಳು— 'ಪ್ರಾಣಾಃ ಋಷಯಃ' ಇದು ಹೋಸ ಪ್ರಜ್ಞೆಯ ಅಭಾವದ ಪ್ರಾಣ ಶಕ್ತಿ ಋಷಿ ಆದೀತೆ ?— 'ವಾಕ್' ಇದು 'ಗೀರ್ವಾಣ ವಾಣಿ' ಆದದ್ದೇಕೆ ?– ಸೂರ್ಯನು 'ಆದಿತ್ಯ' ಎಂಬಲ್ಲಿ ಇದು ಲೈಂಗಿಕ ಪ್ರತಿಮೆ ಆಗಿದೆ.— ನಮ್ಮ 'ಬುದ್ಧಿ'ಯ ದೇವರುಗಳ ಸ್ವರೂಪ–ಪೂರ್ವ ಪರಂಪರೆಯೊಳಗಿನ ಪರಿಭಾಷೆ ಯನ್ನು ಸ್ಪಷ್ಟೀಕರಿಸುವ ಶ್ಲೋಕ: ಅಭಿನವಗುಪ್ತನಿಗೂ (ಕ್ರಿ. ಶ. ೯೮೦) ಮುಂಚಿನದು— 'ಬುದ್ಧಿಃ ತಾತ್ಕಾಲಕೀ ಜ್ಞೇಯಾ' ಎಂಬ ಈ ಉಕ್ತಿ ಪ್ರಸ್ತುತ ಸತ್ಯಾನ್ವೇಷಣೆಯನ್ನು ಬೆಂಬಲಿಸುತ್ತದೆ–Reason : intelligence ಇದಕ್ಕೆ ಅಗ್ರಪಟ್ಟ ದೊರೆತ ಪಾಶ್ಚಾತ್ಯ ತತ್ತ್ವಜ್ಞಾನದ ವೈಶಿಷ್ಟ್ಯ—ಈ Reason : = ಕಣ್ಣು = ಬಯಲು = being ಆಗಿದೆ,–ಜೀವಿತದ ಅಂತರ್ ವಿ–ಸಂಗತಿಯು, ರಸ, ರೂಪ, ಗಂಧಯುಕ್ತ ಆಕರ್ಷಕ ವರ್ಣರಂಜಿತವಿದೆ,— ಪ್ಲೇಟೋನ ಸಾಕ್ಷಾತ್ಕಾರದ ಗವಿ = ಕಣ್—ಕನಕನು ಕಂಡ ಆಲಯದೊಳಗಿನ ಬಯಲು, 'ಭಗ'ವಂತನೇ !—ದಿವ್ಯಾಧ್ಯಾತ್ಮಗಳು ನಂಬಹಚ್ಚಿರುವ illegitimate abstractions ಆಗಿರುವ ಅತ್ಯಂತ ಅಭಾವದ ದೇವರು;–ಸಂಸಾರ ಸಾಗರ ದಾಟಿಸುವ ನೌಕೆ—ಈಶೋಪನಿಷತ್ತಿನ 'ಪ್ರಾಜಾಪತ್ಯ ಸೂರ್ಯ'—ಪ್ಲೇಟೋನ

ಕಲ್ಪನೆಗೆ ಸಮಾಂತರ,—ವೈವಸ್ವತ ಮನ್ವಂತರನ್ನು ಮರಳಿಕಾಣಿಸಿಕೊಳ್ಳಲು ಶಕ್ಯವೆ?—ಪ್ರಕಾಶತತ್ತ್ವೋಪಾಸನೆಯ ಪ್ರಯತ್ನ—ಪ್ರಾಣಲಿಂಗೋಪಾಸಕರ ಆಸುರೀಕೃತ್ಯ— ಬಾಳಿನಲ್ಲಿ, ಪ್ರಾಣೋಪಾಸಕರಿಂದ, ಪುನರುತ್ಥಾನದ ಅಸಾಂಗತ್ಯವು ತಲೆಯೆತ್ತುತ್ತಿರುವ ಎಡೆಗಳು— ತತ್ವತಃ ಅಭಾವಾತ್ಮಕವಾಗಿರುವ 'ವ್ಯಕ್ತಿ'ಯ ತನ್ನ ಭಾಷಿಕ ಸಮಷ್ಟಿಯ ಸಂದರ್ಭದಿಂದ ಅರ್ಥ ಪಡೆಯುತ್ತದೆ. —ಭಾಷೆಯೊಳಗಿನ ಧಾರಣ : Concepts ಶಕ್ಯವಾಗಿರುವ ಬಗೆ—'ಪ್ರಾಣಗಳೇ ಋಷಿ'=ಪ್ರಾಣಲಿಂಗ—ರೇತಶಕ್ತಿ ಋಷಿ ಎಂದು ನಂಬಿಸಲಾಗಿರುವ ಮೋಸದ ಎಡೆ—'ಕಾಲಾಯ ತಸ್ಮೈ ನಮಃ। ಈ ಕಾಲನು ಯಾರು?— ಗರ್ಭ (=ಭಗ) ಸ್ಥ ಕಾಲಶಕ್ತಿ=ಲೈಂಗಿಕ ಪಾತಳಿ, '—ಕಾಲ—ಕಾಲೇಶ್ವರನು' ಎಂಬಲ್ಲಿ ದೊರೆಯುತ್ತಿರುವ ಇನ್ನೊಂದು ಕಾಲದ—ವಿವಸ್ವನ್—ಸವಿತೃವಿನ ಲೈಂಗಿಕ ಪ್ರವೃತ್ತಿಪ್ರಚೋದಕ ಕರಿಗಾಲಕೃಷ್ಣಶಕ್ತಿ, ಪ್ರಳಯಕ್ಕೆ ತಳ್ಳುತ್ತದೆ.—ರಾತ್ರ್ಯಾಗಮೇ ಪ್ರಲೀಯಂತೇ, ಪ್ರಭವತಿ ಅಹರಾಗಮೇ ಕರಿಕಾಲ, ಪ್ರಕಾಶಯುಕ್ತ ಕಾಲದ ಭೇದ—ಮಾನವರ ಜೀವನದಲ್ಲಿ ಅಸಾಂಗತ್ಯವು ಉಂಟಾಗಿರುವ ಎಡೆ.

ಅರಿಕೆ : ಪುಟ ೧—೫

ಮುನ್ನುಡಿ : ಪುಟ ೩೮—೪೨

ಪ್ರಸ್ತಾವನೆ : ಪುಟ ೪೩—೪೮

ಪ್ರಕರಣ ೧. ಸಾಂಸ್ಕೃತಿಕ ಸತ್ಯಾನ್ವೇಷಣ—ಪದ್ಧತಿಯೊಳಗಿನ ಒಂದು ದೃಷ್ಟಿಯ ವಿಚಾರ. ಪುಟ ೧—೪

ಭಾರತೀಯ ಹಾಗೂ ಗ್ರೀಕ ಪುರಾತನ ಪರಂಪರೆಯಲ್ಲಿ, 'ಬುದ್ಧಿ'ಯು (Reason) ಕಾಣಿಸಿಕೊಂಡ ಹಿನ್ನೆಲೆ ಸಮಾನವೇ ಇದೆ; ಏಕೆ?— ಇದರ ಅನ್ವಯಾರ್ಥದ ದೃಷ್ಟಿಯಲ್ಲಿ ಆಗಿರುವ ಬದಲಾವಣೆ— ಮಾನವ ಧರ್ಮ; ಸಂಸ್ಕೃತಿಯ ಪ್ರೇರಣಾಕೇಂದ್ರವು ಸಮಾನವಿದೆ. —ಈ ಮಾನವನು ವಿಶ್ವನಿಯಮಕ್ಕೆ ಒಳಗಾಗಿದ್ದಾನೆ. ಈ 'ಜೀವನವನ್ನು' ಆಳುವ ವಿಶ್ವನಿಯಮವು ಸಾಪೇಕ್ಷವಿದೆ: ಜೀವಿತವು ಜೀವನಕ್ಕೆ ಸಾಪೇಕ್ಷವಿದೆ.

ಪ್ರಕರಣ ೨. ಬುದ್ಧಿಯು ಅವತರಿಸುವ ಮುನ್ನ ಮಾನವೇತಿಹಾಸವು ಪ್ರಾರಂಭವಾಗಿದೆ. ಪುಟ ೪—೧೧

ಇತಿಹಾಸವು ಪ್ರಾರಂಭವಾದದ್ದು ಮಾನವನೊಡನೆ; ಮಾನವನಿಂದ ಬೌದ್ಧಿಕ ಪ್ರೇರಣೆ ವೈಯಕ್ತಿಕ ಸ್ವರೂಪದ್ದು. ಮನಸ್ಸು–ಪ್ರಜ್ಞೆ ಮಾನವರಿಗೆಲ್ಲ ಸಮಾನವಿದೆ. ಭಾಷೆ, ಸಂಸ್ಕೃತಿ ಕಾಣಿಸಿಕೊಂಡದ್ದು ಪ್ರಜ್ಞೆಯ ಅಂಗವಾದ ಮನಸ್ಸಿನ ಪ್ರಾದುರ್ಭಾವದೊಡನೆ –ಅಂತರ್ ವಿಸಂಗತಿ, ಪ್ರೇರಣಾ ದ್ವಂದ್ವವು ನರ(ಳ)ರ ಇತಿಹಾಸವನ್ನು ಪ್ರೇರಿಸಬಲ್ಲುದು;–ಮಾನವೇತಿಹಾಸವನ್ನಲ್ಲ–ಭಾಷೆ ಯಲ್ಲಿ ಆ ಭಾಷಿಕರ ಇತಿಹಾಸವು ಹುದುಗಿರುವುದು ನಿಜವಿದ್ದರೆ, ಈ ಭಾಷಿಕರು ಕಲ್ಪಿಸಿ ಪೂಜಿಸುವ 'ಭಗ'–ವಂತ ಸಂಕೇತವು ವೈವೆತ್ತ ಹಿನ್ನೆಲೆ· ಬೆಳಕಿಗೆ ಬರಲೇಬೇಕು –ನರ(ಳ)ರಿಗೆ ಬುದ್ಧಿಯು ಪ್ರಾಪ್ತವಾದದ್ದು, ಈ 'ಭಗ'–ವಂತನ ಕೃಪೆಯಿಂದ, ಎಂದು ಗೀತೆ ಹೇಳುತ್ತದೆ.

–ಈ ಬುದ್ಧಿ, ಆ ನರ(ಳ)ರನ್ನು 'ಭಗ'–ವಂತನ ಹತ್ತಿರ ಒಯ್ಯುತ್ತದೆ; 'ಭಗ'–ವಂತನಿರುವ ಎಡೆ ಯಾವುದು ? –ಈ 'ಭಗ'–ವಂತನು ಸೃಷ್ಟಿ ನಿರ್ಮಾಣ ಮಾಡುತ್ತಾನೆ. –ಈತನು "ಮಯಾ ಅಧಿ ಅಕ್ಷೇಣ (ಅಧ್ಯಕ್ಷೇಣ)" ಪ್ರಕೃತಿ ಮಾತೆ ಪ್ರಸವಿಸುತ್ತಾಳೆ, ಎಂದಿದ್ದಾನೆ. –ಆದರೆ ಈ 'ಭಗ'ವಂತನೆಂಬವನು ಅ–ಭಾವ ರೂಪನು: ಗರ್ಭ–ಗುಡಿಯಲ್ಲಿ [೦] ಇದ್ದಾನೆ, ಎಂದು ನಂಬಿಸಲಾಗಿದೆ. –ಈ ಅಭಾವ ರೂಪ 'ಭಗ'ವಂತನು ವ್ಯಕ್ತಿ ಸಾಪೇಕ್ಷವಿದ್ದಾನೆ, –ವ್ಯಕ್ತಿನಿರಪೇಕ್ಷ ಪಾತಳಿಯ ಮೇಲೆ ಈ 'ಭಗ'ವಂತ ಇಲ್ಲವೇ ಇಲ್ಲ. –ಇಂಥ 'ಭಗ'ವಂತನನ್ನು ನಂಬಿ ಕೆಟ್ಟವರಿಲ್ಲ. ನಿಜವೇ ?– ಈ ಬುದ್ಧಿಯು ತನ್ನ ಜನಕ–ಜನನಿಯ ಹತ್ತಿರ ಒಯ್ಯುತ್ತದೆ. ಬುದ್ಧಿ–ಭಗವಂತ ಅನ್ಯೋನ್ಯ. –ಈ ಬುದ್ಧಿ ವ್ಯಕ್ತಿ ವಿಶಿಷ್ಟ 'ಸ್ವ'–ಅರ್ಥದತ್ತ ಅಟ್ಟಿಸಿಕೊಂಡು ಹೋಗುತ್ತದೆ. –ಹಾಗಾದರೆ, ಈ ಮಾನವ ಧರ್ಮ=ಸಂಸ್ಕೃತಿಯನ್ನು ಪ್ರೇರಿಸಿದ ಶಕ್ತಿ ತತ್ತ್ವವು ಯಾವುದು ? –ಬುದ್ಧಿಯೆ ? ಪ್ರಜ್ಞೆಯೇ ?

ಪ್ರಕರಣ ೩. –ಬುದ್ಧಿಯ ಇತಿ-ಮಿತಿಗಳು. ಪುಟ ೧೨–೧೭

ಬುದ್ಧಿ 'Reason) ಇದೇ ದೇವರು–ಮಾನವ ಜೀವನದ ಅರ್ಥ= ಸತ್ಯದ ಒರೆಗಲ್ಲು–ಇತಿಹಾಸದ ತತ್ತ್ವಜ್ಞಾನ, ತತ್ತ್ವಜ್ಞಾನದ ಇತಿಹಾಸ ಇವೆರಡರ ತಾಳಮೇಳದಲ್ಲಿ –ಗಣಿತಕ್ಕೆ ಇತಹಾಸವಿದೆ;–ಗಣಿತದ ಇತಿ-ಮಿತಿ ಇತಿಹಾಸ ಬಲ್ಲುದು. ಆದರೆ ಗಣಿತಕ್ಕೆ ಇತಿಹಾಸದ ನೆಲೆ ತಿಳಿಯದು.–ಗಣಿತ ಶಾಸ್ತ್ರದ ಇತಿ–ಮಿತಿ–ಬುದ್ಧಿಯಿಂದ ಭಾಷೆಯ ನೆಲೆ ತಿಳಿಯದು– ಪ್ರಜ್ಞೆ ಮತ್ತು

ಬುದ್ಧಿ ಸಮಾನವಲ್ಲ.— ಪ್ರಜ್ಞೆಯ ಮನಸ್ಸು ಪ್ರೇರಿಸುವ ಪದಗಳ ಆಕೃತಿ ಸ್ವರೂಪವೇ ಬೇರೆ;–ಬುದ್ಧಿಯಿಂದ ಪ್ರಚೋದಿತ ಪದಗಳ ಶಿಲ್ಪದ ಬಗೆಯೇ ಬೇರೆ—ಬುದ್ಧಿಯ ಯುಗದ ದೇವರು ಯಾರು ?–ಬುಧರ> ಬುದ್ಧರ ಯುಗದ ದೇವರು ? 'ಬೋಧಿವೃಕ್ಷ'= ಅಶ್ವತ್ಥವೃಕ್ಷ, ಎಡ್ರಸಿಲ್ (ಸ್ಕಾಂಡಿನೇವಿಯಾ).

**ಪ್ರಕರಣ ೪.** ನಿಜವಾದ ದೇವರು ಯಾರು? ಅಥವಾ ಧರ್ಮ= ಸಂಸ್ಕೃತಿ ಪ್ರಚೋದಕ ಆದಿತತ್ವವು ಯಾವುದು (ಬುದ್ಧಿಯೊ? ಪ್ರಜ್ಞೆಯೊ?)
ಪುಟ ೧೮–೩೦

ಐನ್‌ಸ್ಟನ್ ಕಂಡ ಸತ್ಯದ ಒರೆಗಲ್ಲು–I) ಬಾಹ್ಯ ಸಾಮ್ಯದ ಪ್ರಮಾಣ; ಮತ್ತು II ಆಂತರಿಕ ಅಂತಃಸಂಗತಿಯ ಸೌಂದರ್ಯ ಪೂರ್ತಿ—ಪ್ಲೇಟೋನ ದೇವರು ಈ ಗೃಹೀತದ ವಿಮರ್ಶೆ–ಅರಿಸ್ಟೋಟ್ಲನ ದೇವರು –Reason = ಬುದ್ಧಿ ದೇಹದ ಅಂಗ– nous ಪ್ರಜ್ಞೆ. ಸ್ಥಲ (ದೇಹ) ಮತ್ತು ಕಾಲ (ಪ್ರಾಣಲಿಂಗ) ಈ ವಿಭಾಗ ದ್ವಯದ ಆಚೆಗೆ ಪ್ರಕಾಶ ಪಾತಳಿಯ ಮೇಲಿಂದ (comes from outside nous = not coterminter with body) ಪ್ಲೇಟೋ ಅರಿಸ್ಟೋಟ್ಲ ಇವರ ಭೂಮಿಕೆಯಲ್ಲಿ ಭೇದವಿದೆ–ಭೌತಕಾಲ ಅಥವಾ ಸ್ಥಲ ಅಂಗವಾದ ಗತಿ 'ಕಾಲ'ವೇ ಅಲ್ಲ. ಗತಿಯಲ್ಲಿ ಇರುವ ಸ್ಥಳ–ಇದು ಕಾಲದ ಭ್ರಾಂತಿ! –ಕಂನಾಡ ಪ್ರಾಜ್ಞರು ಇದನ್ನು ಬಯಲು (Vaid, Vacum) ಎಂದಿದ್ದಾರೆ –ಆತ್ಮನ್–ಪರಮ ಆತ್ಮನ್ ಈ ಗೃಹೀತವು ಕೃತಕ; ಅಭಾವವನ್ನೇ ಸ್ಥಾಯೀ ಆಗಿರುವ= ಬಯಲನ್ನು ನಂಬಿಸುವ ಮೋಸದ ತಂತ್ರ.— ಸಾಂಸ್ಕೃತಿಕ ಸತ್ವಾನ್ವೇಷಣೆಯಲ್ಲಿ ಸ್ತರಗಳನ್ನು ನಿರ್ದಿಷ್ಟಪಡಿಸಿ ಅರಿವ ಅವಶ್ಯಕತೆ.

**ಪ್ರಕರಣ ೫.** ಸಾಂಸ್ಕೃತಿಕ ಸ್ತರಗಳ ಭೂಮಿಕೆಯಿಂದ ಪ್ರಜ್ಞೆ, ವಿದ್ಯೆ, ಬುದ್ಧಿ, ಈ ಪರಿಭಾಷೆಯ ಸಮೀಕ್ಷೆ.
ಪುಟ ೩೦–೪೩

ಭಾಷೆಗೆ ಇತಿಹಾಸವಿದೆ–ಇತಿಹಾಸದ–ಐತಿಹಾಸಿಕ ಆಗುಹೋಗುಗಳ ಆಧಾರಕ್ಕೆ noumena = ಮನುಸಮಯ ಇರುತ್ತದೆ. ಆದರೆ, ಸ್ಥಲ (ದೇಹ)– ಕಾಲ (ಪ್ರಾಣಲಿಂಗ) ರೂಪ ಈ ಭೌತ ವಿಭಾಗದ್ವಯದ ಸಂದರ್ಭವು ಸನ್ನಿವೇಶ= (Situation) ಎನಿಸುತ್ತದೆ. ಇದರ ಹಿನ್ನೆಲೆಯ ಪ್ರೇರಣೆ ಪ್ರಾಣಲಿಂಗ ಚೇತಸ= ಚಿತ್ತ, ಬುದ್ಧಿಯದು ಇರುತ್ತದೆ.—ಉದಾ: ೧) ಸವಿತೃ

ವಿಸಸ್ವನ್, ಜಾತವೇದ ಅಗ್ನಿ, ಮನುಜ ಈ ಪದಗಳ ಧಾರಣ 'ಸಮಯ'ದ ಆಧಾರದ ಮೇಲೆ ಇವೆ. II) ಆದಿತ್ಯ, ಮಾರ್ತಾಂಡ, ನಚಿಕೇತ ಅಗ್ನಿ, ಸೂರ್ಯನಾರಾಯಣ. ಇಲ್ಲಿ ಕೃತಕ, ಬೌದ್ಧಿಕ ಪರಿಕಲ್ಪನೆಯ ಹಿನ್ನೆಲೆ ಇದೆ.– ಮಾನವ ಭಾಷೆಯೊಳಗಿನ ಸ್ತರಗಳು ಇಬ್ಬಗೆಯವು— ೧) ಪ್ರಜ್ಞಾಯುಕ್ತ ಮನಸ್ಸಿನ ಹಿನ್ನೆಲೆಯ ಸ್ತರ; ೨) ಪ್ರಾಣಲಿಂಗ ಶಕ್ತಿ, ಚಿತ್ತ–ಬುದ್ಧಿಶಕ್ತಿಯ ಪ್ರೇರಣೆಯ ಸ್ತರ (ಗೌತಮಾಗ್ನಿ)—ಇದರಿಂದಾಗಿ ಮಾನವೇತಿಹಾಸದೊಳಗಿನ ಸ್ಥಿತ್ಯಂತರ ಗ್ರಹಿಸಿಕೊಳ್ಳಲು ಶಕ್ಯ— ಈ ಎರಡೂ ಬಗೆಯ ಶಿಲ್ಪಭೇದ— ಸಂಸ್ಕೃತಿ ಪ್ರಾರಂಭವಾದದ್ದು ಪ್ರಜ್ಞೋದಯದಿಂದ–ಭಾರತೀಯ ಸಂಸ್ಕೃತಿಯಲ್ಲಿ ಆದ ಪಲ್ಲಟ=ಸವಿತೃವು ಸಾವಿತ್ರಿ [೦] ಆಗುವಲ್ಲಿ–ಗೀತೆಯಲ್ಲಿ ಮೋಸ. ಬುದ್ಧಿಯನ್ನು (ಪ್ರಜ್ಞೆಯ) ಮನಸ್ಸಿಗಿಂತ ಶ್ರೇಷ್ಠ. ಗೀತೆಯ ನರ(ಳ)ನ ಸಾರಥಿ;= ಹಯಗ್ರೀವ=ರಥದ ಕುದುರೆ– ಕುರುಕ್ಷೇತ್ರ=ಕಾಮಿನಿ– ಪುರುಷ=ಗುಹೇಶ್ವರ=ಬಯಲಲ್ಲಿ ಅಡಗಿದವನು' ಕಂಡಾನೆ? —ಭಾರತೀಯ ಪಿರಾಮಿಡ್ ಸೊಬಗು.– ಪವಾಡಿ ನಾಗ–ಲಿಂಗನಿಗೆ ನಮೋನಮೋ– ನಿಜವಾದ ದೇವರು ಯಾರು? ಬುದ್ಧಿ=(Reason)? ಅಥವಾ ಪ್ರಜ್ಞೆ=Nous?

**ಪ್ರಕರಣ ೬. ಮಾನವನ ಬಾಳವಾರಿಯಲ್ಲಿ ಬುದ್ಧಿಯು ಅವತರಿಸಿರುವ ಹಿನ್ನೆಲೆ: ಸನ್ನಿವೇಶ.**

ಪುಟ ೪೪–೫೩

ಭಾರತೀಯ ಪೂರ್ವಪರಂಪರೆಯಲ್ಲಿ,– ಆಪೋವಾ ಇದಂ ಅಗ್ರೇ ಮಹತ್ ಸಲಿಲಂ ಆಸೀತ್– ಗ್ರೀಕ್ ಪೂರ್ವಪರಂಪರೆಯಲ್ಲಿ– ಪ್ಲೇಟೋನ ದೇವರು= Geometer. –ತಂದೆಯ 'ತಲೆ'ಯಿಂದ ಬುದ್ಧಿ ದೇವಿ ಹುಟ್ಟುತ್ತಾಳೆ ಅಥವಾ 'ತಲೆ' ಶ್ಲೇಷಾರ್ಥ–ವೇದ ಇದನ್ನು 'ಮೂರ್ಧನ್' ಎಂದಿದೆ. ಆಪ್ಟೇ ಕೋಶವು, ಇದರ ಮೂಲಾರ್ಥ ಹೇಳಿದೆ.= 'ಮುಹ್ಯತಿ ಅಸ್ಮಿನ್ ಆಹತೇ ಇತಿ ಮೂರ್ಧಾ:' ಈ ಆಹನಸ್ಯದಿಂದ ಆಘಾತಮಾಡಿದರೆ ಮೂರ್ಛೆ, ಮೂಢತೆ ಬರುತ್ತದೆ. ಇಂಥ ಇಂದ್ರಿಯ ಜನ್ಮವಿತ್ತಿದೆ. –ವೈಚಾರಿಕ ಆಕೃತಿಗಳು ಸಮಾನ ಇರುತ್ತವೆ. ಅನಾಕ್ಸಾಗೋರಾಸನು ಎಂಪೆಡೊಕ್ಲಸನಿಂದ ಸತ್ಯಕ್ಕೆ ಆದ ಅಪಚಾರ ತಿದ್ದುವ ಪ್ರಯತ್ನ ಮಾಡಿದ್ದಾನೆ.–ಪ್ರಪಂಚದ ಆದಿ ಕಾರಣ ತತ್ತ್ವದ Nous mind ಹಿರಿಮೆ.

ಪ್ರಕರಣ ೭. ಪ್ರಜ್ಞೆ ಮತ್ತು ಬುದ್ಧಿ ಇವೆರಡರಲ್ಲಿ ಇರುವ ಭೇದ.

ಪುಟ ೫೪–೬೫

ಬುದ್ಧಿಗಿಂತ ಮನಸ್ಸು ಕೆಳಗಿನದು (ಕೀಳ) ಎಂದು ಗೀತೆ ಸುಳ್ಳಾಡುತ್ತಿದೆ.– ಬುದ್ಧಿ–ಬುಧನು ಚಂದ್ರನಿಂದ ಹುಟ್ಟಿರುವನೆಂಬ ಕಥೆ–ಬುದ್ಧಿಯನ್ನು ಪ್ರತಿನಿಧಿಸುವ ಗ್ರೀಕ್ ರೋಮನ್ ದಿವ್ಯಕಥೆಗಳ ತುಲನೆ–ಚಂದ್ರನಲ್ಲಿ ತಲೆಕೆಡಿಸುವ, ಹುಚ್ಚುಹಿಡಿಸುವ ಅಂತಃಶಕ್ತಿಯಿದೆ.Lunacy ಮಹತ್ ಸಲಿಲಂ =ಸ್ರುಜನಲದೊಡನೆ ಬುದ್ಧಿ (ಮಹತ್) ಇದರ ಜನನ ರಾತ್ರಿಕಾಲದಲ್ಲಿ ಆಗಿದೆ! ಇದಕ್ಕೆ ಪ್ರತಿಯಾಗಿ (ಧೀ=ಪ್ರಜ್ಞೆ: ವಿವಸ್ವನ್ ಸವಿತೃ=ಹಗಲು. Secrecy is sin–ಬಯಲನ್ನು=ಅಭಾವವನ್ನು 'ಉಂಟು'=ವಾಸ್ತವ ಎಂದು ನಂಬುವ ಒಲವು, ಬುದ್ಧಿಯ ಹುಟ್ಟಿನಿಂದ ಕಾಣಿಸಿಕೊಂಡಿದೆ. —ಭಾರತೀಯ ಪರಂಪರೆಯಲ್ಲಿ, ಆದಿತ್ಯ (ಅದಿತಿ) ಸಂಪ್ರದಾಯವು ತಲೆಯೆತ್ತಿರುವ ಹಂತವು ಇದು— ಪ್ರಾಥ್ಯಾಗೋರಾಸನು 'ನಿತ್ಯ ಚರಲಿಂಗ'ದ ಪ್ರತಿನಿಧಿ. ಒಂದು ಕಾಲ್ಪನಿಕ ಗ್ರಹವನ್ನು (Planet) ಉಂಟು ಎಂದು ನಂಬಿಸಿದ್ದಾನೆ.–ಇಜಿಪ್ತಿನ ಪೂರ್ವ ಪರಂಪರೆಯಲ್ಲಿ, ಚಂದ್ರೋಪಾಸನೆಯು ಇತ್ತು–ಕಪಿ (Baboon)=ಚಂದ್ರ ಬುದ್ಧಿದೇವತೆ (Thot)–ವ್ಯಕ್ತಿ ಸಾಪೇಕ್ಷ ಬಯಲು (ಕಣ್) ಉಪಾಸಕ, ಪೆರ್ಮೈನೈಡಸ್; ಇದು ಪ್ಯಾಥ್ಯಾಗೋರಾಸನ ಗುಪ್ತ ಮಾರ್ಗ–ವ್ಯಕ್ತಿ ಸಾಪೇಕ್ಷ ಬಯಲ [o] ಭಕ್ತ ಪೆರ್ಮೈನೈಡಸನು ಕಾಲಗತಿಯ ಉಪಾಸಕ ಹಿರಾಕ್ಲಿಟಸನನ್ನು ನಗೆಗೆ ಈಡು ಮಾಡಲು ಇವನು ಅವನ ನಿರ್–ವಯಲು = Not Being (ಅತ್ಯಂತ ಅಭಾವದ) ಭಕ್ತನು ಎಂದಿದ್ದಾನೆ.–ಬಯಲು = ಕಣ್ = ಛಾಯಾ ಭಗವತಿ (ಕಾಲಿ), ಹಿರಾಕ್ಲಿಟಸ್ ಗಣ್ =ಅಗ್ನಿಸ್ತಂಭ ಉಪಾಸಕನು. ಇದು logos–ಗ್ರೀಕ ಅನಾಕ್ಸಾಗೋರಾಸನು Nous mind ಮಹತ್ವವನ್ನು ಅರಿತೂ ಜಾರಿರುವಂತೆ, ಭಾರತೀಯ ಕಾಲಿದಾಸನು ವೈವಸ್ವತ ಮನುವನ್ನು 'ಆದ್ಯಃ' ಎಂದರೂ, ಈ ಮನುವನ್ನು ಸ್ವಯಂಭೂ ಮನು ನರ(ಳ)ನನ್ನಾಗಿಸುವ ಅಭಿಚಾರ ಕೃತ್ಯವೆಸಗಿದ್ದಾನೆ.

ಪ್ರಕರಣ ೮. ಕವಿಕುಲಗುರು ಕಾಲಿದಾಸನು ಜಾರಿದ್ದು ಎಲ್ಲಿ? (ಹಲ್ಲಿಲ್ಲದ ಕಪ್ಪೆ ಹಾವು ನುಂಗುವ ಕಡೆಯಲ್ಲಿ).

ಪುಟ ೬೬–೮೧

ಈ ಜೀವನವನ್ನು ಆಳುವ ಶಕ್ತಿ ಹಗಲು, ವೈವಸ್ವತ–ಸವಿತೃ = ಪ್ರಜ್ಞೆ– ಇದೇ ಮೇರೆಗೆ ಜೀವಿತವನ್ನು ಆಳುವ ಶಕ್ತಿಯು ಇರುಳು, ಚಂದ್ರ=ಪ್ರಾಣಲಿಂಗ ಶಕ್ತಿ–ವಿಶ್ವನಿಯಮವನ್ನೇ ವಂಚಿಸುವ ಪ್ರಯತ್ನ ಮಾಡಿರುವ ಮಾಟ= ಭಾನಾಮತಿ ಪ್ರಯೋಗ ವೇದದಲ್ಲಿ ದೊರೆಯುತ್ತದೆ– ಉದಾ: ಮಾರ್ತಾಂಡ ನಾವಮಾನಂ ಸೂರ್ಯಃ ! ಈ ಸೂರ್ಯ (?) ಸಲಿಲ–ಜಲದಲ್ಲಿ (ಅದಿತಿಗೆ) ಹುಟ್ಟಿ ರುವನಂತೆ (x–೭೨ ೮, ೯)– ಕಾಲಿದಾಸನು ವೈವಸ್ವತನನ್ನು ಚಂದ್ರನ= ಸ್ವಯಂಭುವಿನ ಹಂತಕ್ಕೆ ಒಯ್ಯುವ 'ಮಾಟ' ಮಾಡಿದ್ದಾನೆ;– 'ಪ್ರಣವಃ ಛಂದಸಾಂ ಇವ' ಈ ಮನು ವೈವಸ್ವತ, ಎಂಬ ಈ ಉಪಮೆ, ಅನುಚಿತವಿದೆ.– ಪ್ರಣವ ಮಂತ್ರದ ಭಯಾವಹ ಸ್ವರೂಪ–ಸವಿತೃ ಪ್ರಾರ್ಥನೆಯ ಶಾಸ್ತ್ರೀಯ ಭೂಮಿಕೆ–ಆದ್ಯ ಮನು = ವೈವಸ್ವತ = ಆದ್ಯ ಅಗ್ನಿ = ಜಾತವೇದ–ಪುಣ್ಯ ಶ್ಲೋಕ ಮನುವನ್ನು ಸ್ಥಾನ ಭ್ರಷ್ಟನಾಗಿಸಿ, ಪುಣ್ಯಶ್ಲೋಕ 'ನಳ'ನ ಸ್ತೋತ್ರ ಇಂದು ಪ್ರಚಾರದಲ್ಲಿದೆ.– ಪಾಶ್ಚಾತ್ಯ ಪರಂಪರೆಯಲ್ಲಿ Nous Mind ಉಪಾಸಕ ಅರಿಸ್ಟೋಟಲನ ಬಗೆಗಿನ ತಿರಸ್ಕಾರ ಕ್ರೈಸ್ತಪಂಥೀಯವರು ಪ್ರಕಾಶತತ್ತ್ವದ ಉಪಾಸನೆಯನ್ನು ನಷ್ಟಪಡಿಸಲು ಮಾಡಿರುವ ಪ್ರಯತ್ನಗಳು–ಕಾಲಿದಾಸನಿಂದ ಆಗಿರುವ ಉಪಕಾರವನ್ನು ಕಡೆಗಣಿಸಲಿಕ್ಕಾಗುವದಿಲ್ಲ. ಮನು ನಾಮಗಳ ತೊಡಕು–ಸಂದೇಹದ ಕೊಳಚೆ ನಿರ್ಮಿಸಲಾಗಿದೆ –'ಸಪ್ತ' ಸಂಖ್ಯೆ ಚಾಂದ್ರ ಪಂಥೀಯ ರಹಸ್ಯಾರ್ಥದ್ದು: ಸಪ್ತ! ಋಷಿ (!) ಮೋಸ; ಸಪ್ತ ಅಶ್ವ ಸೂರ್ಯ ನಿಗೆ ಮಾಟ ! ಸಪ್ತಮನುಗಳು ! ಚಂದ್ರರ್‍ತು–ಮನು–ಜರ ಪಿತಾ 'ಮನು ! ಆದ್ಯನು ಯಾರ ಜನಕತಂದೆ ಅಲ್ಲ. –ಸಂಶಯಾತ್ಮ ವಿನಶ್ಯತಿ–ವೈವಸ್ವತ ಮನುವಿನಲ್ಲಿ ಅವಿಚಲ ನಿಷ್ಠೆ ಬೇಕು– ಬುದ್ಧಿಗೆ ಕಡಿವಾಣ, ಪ್ರಜ್ಞೆಯಲ್ಲಿ ನಿಷ್ಠೆ = ಐನ್‌ಸ್ಟನ್‌ರ ನಿಷ್ಠೆ.

ಪ್ರಕರಣ ೯. ಉಪಸಂಹಾರ. ಪುಟ ೮೨–೯೨

ಬಾಳಿನಲ್ಲಿ ಸ್ತರಗಳು ಎರಡು : ಜೀವನ ಮತ್ತು ಜೀವಿತ. ಇವೆರಡರ ಸ್ವರೂಪ ಲಕ್ಷಣ–ಬುದ್ಧಿಯು ಮೈವೆತ್ತ ಇತಿಹಾಸ –ಜೀವನರೂಪ ಸಾಂಸ್ಕೃತಿಕ (ವಸ್ತ್ರದ) ನೇಯ್ಗೆಯ ನೈಸರ್ಗಿಕ ಸ್ವರೂಪ–ಆದರೆ ಅಭಾವವನ್ನೇ ಸ್ಥಾಯಿ ಎಂದು ನಂಬಹಚ್ಚುವ ದೇವತಾರಾಧನೆ, –ಈ ಮಾನವನನ್ನು ನರ(ಳ)ನನ್ನಾಗಿ ಸುತ್ತದೆ. ಉದಾ– ವಿಷ್ಣು, ರುದ್ರ, ಗಣಪತಿ, ಹನುಮ ಇತ್ಯಾದಿ–ಬುದ್ಧಿ

Reason; intelligence ಬಗೆಗೆ ಬರ್ಗಸನ್‌ರ ನಿಷ್ಕರ್ಷೆ. ಈ ಅನ್ವೇಷಣೆಯನ್ನು ಪುಷ್ಟೀಕರಿಸುತ್ತವೆ. –ಇತಿಹಾಸವು 'ನಾಳೆ'ಗಳತ್ತ ಸಾಗಬೇಕಾದದ್ದು, –ಇದು ವೃತ್ತಾಕೃತಿಯದು ಆಗತೊಡಗಿದೆ; –ಈ ಮಾನವನು ವಿಶ್ವನಿಯಮಕ್ಕೆ ಅಂಕಿತನಿದ್ದಾನೆ. –ಸ್ಥಲ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಇವೆರಡರ ಸಂಬಂಧದ ಸ್ವರೂಪ 'ಕಾಲ'ವು ಸ್ಥಲದ ಅಂಗವೇ ಹೊರತು, ಇದಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲ. –ವೃತ್ತಾ ಕೃತಿಯ [o] ಈ ಜೀವಿತವು, ನಿತ್ಯ ಅರ್ಥ ವಿಹೀನ, –ಮತ್ತು ಸೂಕ್ಷ್ಮ ಕತ್ತಲಿನಿಂದ ಆವೃತವಿದೆ. ಸಂದಿಗ್ಧತೆ, ಪರಸ್ಪರ ವಿಸಂಗತಿ ಎಂದರೆ –ಕತ್ತಲು;–ಪುಣೆ ಮುಂಬೈ ಭಾಗದ ಭಗವಾನ್ ರಜನೀಶರ ಸೂತ್ರ–ಸಂಭೋಗದಿಂದ ಸಮಾಧಿಯತ್ತ–ಭಾರತೀಯ ಪರಂಪರೆಯಲ್ಲಿ ಒಳಗೊಂಡಿರುವ ಎರಡು ಬಗೆಯ ಬ್ರಹ್ಮನ್ ತಾತ್ತ್ವಿಕ ಶಕ್ತಿ–೧) ವಿಶ್ವಾಮಿತ್ರಸ್ಯ ಬ್ರಹ್ಮೇದಂ ರಕ್ಷತಿ ಭಾರತಂ ಜನಂ ! (ಋ III ೫೩–೧೨)–೨) ಇದು ವಶಿಷ್ಠ ದಕ್ಷಿಣ ಕಪರ್ದ ಪಂಥೀಯ ಬ್ರಹ್ಮನ್ = ಬ್ರಹ್ಮದ್ವಿಷೇ ಶರವೇ ಹಂತವೈ ರುದ್ರಾಯ ಧನುಃ ಆತನೋಮಿ" ಎಂಬ ಆಂಭೃಣೀ ಕುಮಾರಿ. ಈ ಅಭಿಚಾರ ಕೃತ್ಯವು ವಶಿಷ್ಠ–ವ್ಯಾಸ ಪಂಥೀಯ ಸಾಂಸ್ಕೃತಿಕ ಮಟ್ಟವನ್ನು ನಿದರ್ಶನಕ್ಕೆ ತರುತ್ತಿದೆ.

# ಮುನ್ನುಡಿ

ಮನುಷ್ಯನ ಶ್ರೇಯಸ್ಸು ಯಾವುದರಲ್ಲಿದೆ ? ಅವನ ಅಶ್ರೇಯಸ್ಸು ಯಾತರಿಂದ ಆಗಿದೆ ? ಇದು ಶಂ. ಬಾ. ಅವರ ಪ್ರಧಾನ ತಾತ್ವಿಕ ಕಾಳಜಿಯೆಂದು ನನಗೆ ತೋರುತ್ತದೆ. ಇದರ ಶೋಧಕ್ಕೆ ಅವರು ಮನುಷ್ಯನ ಮೂಲಗಳಿಗೆ ಹೋಗುತ್ತಾರೆ. ಮನುಷ್ಯ ಯಾತರಿಂದ ಮನುಷ್ಯನಾದ ? ಮನಸ್ಸಿನಿಂದಲೆ, ಮನುಷ್ಯ ಮನುಷ್ಯನೆನಿಸಿದ. ಮನಸ್ಸಿನ ಉದ್ಬೋಧದ ಫಲವೇ ಪ್ರಜ್ಞೆ. ಪ್ರಜ್ಞೆಗೆ ಅಧಿಕಾರಿಯಾದ ಮನುಷ್ಯ ಬೆಳಕನ್ನು, ಬೆಳಕಿನ ಭೌತಿಕ ಮೂಲವಾದ ಸೂರ್ಯನನ್ನು ಅದರ ಸಂಕೇತವಾಗಿ ಮಾಡಿಕೊಂಡ. ಅದರ ಪಾರ್ಥಿವ ಸ್ವರೂಪವಾದ ಅಗ್ನಿಯೂ ಅದರ ಸಂಕೇತವಾಯಿತು. ಅದರ ಆರಾಧನೆಯೇ ಪ್ರಥಮ ಧರ್ಮ. ಅದು ಜಾತವೇದಾಗ್ನಿ; ಅಂದರೆ 'ವೇದ' (ತಿಳಿವು) ವನ್ನು ಕೊಡುವಂಥದು. ಈ 'ವೇದ'ದೊಡನೆಯೆ ನರನು ಮನುಷ್ಯನಾದ; ಅದರೊಡನೆಯೇ ಅವನ ಇತಿಹಾಸ ಆರಂಭವಾದದ್ದು. ಪ್ರಜ್ಞೆಯೊಂದೇ ತ್ರೈಕಾಲಿಕ : ನಿನ್ನೆ–ಇಂದು–ನಾಳೆಯ ಕಲ್ಪನೆಯುಳ್ಳದ್ದು. ಮನಸ್ಸು, ಪ್ರಜ್ಞೆ, ವೇದ–ಇಲ್ಲದೆ ಇತಿಹಾಸವಿಲ್ಲ, ಸಮಾಜವೂ ಇಲ್ಲ. ಈ ವೇದ =(wit, wisdom) ಸ್ವಭಾವತಃ ವೈಶ್ವಾನರ (=ಮನುಷ್ಯ ಸಮಾಜ); ವೈಯಕ್ತಿಕವಲ್ಲ. ವೈಶ್ವಾನರಾಗ್ನಿ ಅವನ ಆರಾಧನೆಯ ವಸ್ತುವಾಗಿದ್ದಷ್ಟು ಕಾಲ ಅವನು ತನ್ನನ್ನು ಪ್ರಜ್ಞೆಯ ಅಧೀನವಲ್ಲಿಟ್ಟುಕೊಂಡು ನಡೆಯುತ್ತಾನೆ. ಅದು ಶ್ರೇಯಸ್ಸಿನ ದಾರಿ; ಮನುಷ್ಯತ್ವದ ದಾರಿ; ಬೆಳಕಿನ ದಾರಿ. ಅದೇ ಅವನ ಧೀಯನ್ನು ಸರಿದಾರಿಯಲ್ಲಿ ಪ್ರಚೋದಿಸುತ್ತದೆ. ಚೋದನಾ ಲಕ್ಷಣವೆಂದು ಉಕ್ತವಾದ ಧರ್ಮ ಇದು. ಈ ಚೋದನೆಯಲ್ಲಿ ಪ್ರ–ಗತಿಯೂ, ಸಂ–ಯಮವೂ ಸೇರಿದೆ. ಅದರ ಧ್ಯೇಯ ಸಮಷ್ಟಿ ಹಿತ.

ಆದರೆ, ಮನುಷ್ಯ ನರತ್ವದಿಂದ ಮೇಲೇರಿ ತಾನೆ ಮನುಷ್ಯನಾದವನು ? ಜೈವಿಕ ಉಳಿಗಾಲಕ್ಕಾಗಿ ನರತ್ವದ ಅಂಶಗಳು ಅವನಲ್ಲಿ ಉಳಿದೇ ಇದ್ದವು. ಇಂದಿಗೂ ಇವೆ. ಅವು 'ವೇದ'ದ ಪ್ರಜ್ಞೆಯ ಅಂಕೆಯಲ್ಲಿ ಉಳಿಯಲು ಇಷ್ಟಪಡುವುದಿಲ್ಲ. ಮನುಷ್ಯತ್ವ ಅವನನ್ನು ಬೆಳಕಿನತ್ತ ಚೋದಿಸುತ್ತಿದ್ದರೆ ನರತ್ವ ಅವನನ್ನು ಕತ್ತಲೆಯತ್ತ ಜಗ್ಗುತ್ತದೆ. ಈ ಜಗ್ಗಾಟದಲ್ಲಿ ಪ್ರಜನ

ನೇಂದ್ರಿಯವೇ ಪ್ರಧಾನವಾಗಿ ಉಳ್ಳ ಇಂದ್ರಿಯಗಳ ಸ್ವೇಚ್ಛಾಪೇಕ್ಷೆ ಕೆಲಸ ಮಾಡುತ್ತದೆ–ಮಾಡುತ್ತಲೇ ಇರುತ್ತದೆ. ನುಣುಪಾದ ಕಂಬವನ್ನು ಏರ ಬೇಕಾದವನಂತೆ ಮನುಷ್ಯ ನರತ್ವದ ಕಡೆಗೆ ಆಗಾಗ್ಗೆ ಜಾರುತ್ತಾನೆ. ಅದರಲ್ಲಿ ಒಂದು ಹಿತವಾದ ಅನುಭವ ಅವನಿಗೆ ಆಗುತ್ತದೆ. ತ್ರಿಕಾಲವ್ಯಾಪ್ತಿಯಾದ ಪ್ರಜ್ಞೆಯ ಕಠಿಣ ಮಾರ್ಗದ ಅನುಸರಣೆಗಿಂತ ಕಾಲದ ಕೋಟಲೆ ಇಲ್ಲದೆ ಇಂದ್ರಿಯಗಳಿಗೆ ತನ್ನನ್ನು ತಾನು ಬಿಟ್ಟುಕೊಡುವ ಮತ್ತು ಹೊಣೆಗಾರಿಕೆ ಯಿಂದ ಮುಕ್ತವಾದ ಮಾನವ ಪೂರ್ವಸ್ಥಿತಿಯಲ್ಲಿ ಅವನು ಒಂದು ಆನಂದವನ್ನು ಅನುಭವಿಸುತ್ತಾನೆ. ಅವನ ಈ ನರತ್ವದ ಎಳೆತ ತಾನೂ ಒಂದು ಧರ್ಮವೆಂದು ಸೋಗುಹಾಕಿಕೊಳ್ಳುತ್ತದೆ. ಪ್ರಜ್ಞೆ ಬೆಳಕನ್ನು, ಸೂರ್ಯನನ್ನು ಸಂಕೇತ ಮಾಡಿ ಕೊಂಡಂತೆ ಇದು, ನೀರನ್ನು (=ಇಂದ್ರಿಯ ಸ್ರಾವ,) ಜನನೇಂದ್ರಿಯಗಳನ್ನು, ಚಂದ್ರನನ್ನು, ಸರ್ಪವನ್ನು ಆರಾಧ್ಯ ಸಂಕೇತಮಾಡಿಕೊಳ್ಳುತ್ತದೆ. "ಅಯ್ಯಾ, ಪ್ರಜ್ಞೆಯ ಕೋಟಲೆ ಯಾಕೆ ಬೇಕು ? ಸುಮ್ಮನೆ ಇಲ್ಲಿ ಬಾ ! ಇಲ್ಲಿ ನೀನು ಸುಖವಾಗಿರಬಲ್ಲೆ. ಇದಕ್ಕೆ ನಿನ್ನನ್ನು ಒಪ್ಪಿಸಿಕೋ ! ಎಲ್ಲ ಚಿಂತೆಗಳಿಂದ ನೀನಿಲ್ಲಿ ಮುಕ್ತನಾಗಿರಬಲ್ಲೆ. ಇದು ಅ–ಮೃತ. ಇದನ್ನು ಕುಡಿದವನಿಗೆ ಮೃತ್ಯು ವಿಲ್ಲ !" ಎನ್ನುತ್ತದೆ. ಈ ಬಗೆಯ ವಿಚಾರಧಾರೆಯ ಚರಮ ಸ್ವರೂಪವೇ ಸರ್ವಾರ್ಪಣಪೂರ್ವಕವಾದ (=ತನ್ನ ಹೊಣೆಯನ್ನು ಪೂರ್ತಿ ಹಾರಿಸಿ ಕೊಳ್ಳುವ) ಭಕ್ತಿಪಂಥ, ವಾಮಾಚಾರ ಪಂಥಗಳು. ಎಲ್ಲ ಕಾಟಗಳ ಮೂಲ ವಾಗಿರುವ ಜೀವನವನ್ನೇ ಸ್ವೇಚ್ಛೆಯಿಂದ ತ್ಯಜಿಸುವ ತರಬೇತಿ ವಿಧಾನಗಳಾದ ಯೋಗಪಂಥಗಳು–ಇತ್ಯಾದಿ. ಇವು ತಿರುವುಮುರುವು ಮಾಡಿ ಇಂದ್ರಿಯ ಗಳನ್ನು ಪೂರ್ತಿ ಉಪವಾಸವಿಡುವ ಸಂನ್ಯಾಸರೂಪವನ್ನೂ ತಾಳಬಹುದು. ಒಂದು ಮಾತಿನಲ್ಲಿ ಹೇಳುವುದಾದರೆ ಇವೆಲ್ಲವುಗಳ ಲಕ್ಷಣ ಜೀವನ, ಜವಾಬ್ದಾರಿ ಗಳಿಗೆ ಪರಾಙ್ಮುಖತೆ; ಅತಿರೇಕದ ವೈಯಕ್ತಿಕತೆ, ವೈಶ್ವಾನರತ್ವದ ನಿರಾಕರಣೆ– ಒಟ್ಟಿಗೆ negation.

ಈ ನಕಾರಾಧನೆಯಲ್ಲಿರುವ ಆಕರ್ಷಣೆಗಳು ಸ್ವಯಂವೇದ್ಯವಾಗಿವೆ. ಆದ್ದರಿಂದ ಅವುಗಳಿಗೆ ಅನುಯಾಯಿಗಳು ಜಗತ್ತಿನ ಎಲ್ಲ ದೇಶಗಳಲ್ಲಿ ದೊರೆ ತರು; ಈಗಲೂ ದೊರೆಯುತ್ತಾರೆ. ಆದರೆ ಪ್ರಜ್ಞೆಯ ಪ್ರತಿಷ್ಠೆ ಬಲವಾದದ್ದೇ ನಮ್ಮ ದೇಶದಲ್ಲಿ. ವೇದಗಳಿಗಿದ್ದ ಪ್ರತಿಷ್ಠೆ ಇದಕ್ಕೆ ಉದಾಹರಣೆ. ಆದ್ದರಿಂದ

ವಿರುದ್ಧ 'ಮತಗಳು' ಕೂಡ ತಮ್ಮ ನಿಲುವನ್ನು ಗಟ್ಟಿಮಾಡಿಕೊಳ್ಳಲು ತಾವೂ 'ವೇದ'ಮತದ ಬಾಹ್ಯ ವೇಷವನ್ನು ಧರಿಸುವ ತಂತ್ರವನ್ನು ಅನುಸರಿಸಿದವು. ದಿವಾಸಮಯ (ಪ್ರಜ್ಞೆಯ ಆರಾಧಕ) ಮತ್ತು ರಾತ್ರಿಸಮಯ (ಪ್ರಜ್ಞೆಯ ನಿರಾಕರಣ)ಗಳಲ್ಲಿನ ಘರ್ಷಣೆ ಮತ್ತು ಕೊನೆಗೆ ಒಂದು ತರದ ರಾಜಿ ಎಲ್ಲ ದೇಶಗಳಲ್ಲಿ ನಡೆದುವೇ ಆದರೂ ಭಾರತದಲ್ಲಿ ಬೇರೆಲ್ಲ ಕಡೆಗಳಿಗಿಂತ ಹೆಚ್ಚಾಗಿ ಈ ಸೋಗಿನ ತಂತ್ರ ಗೆದ್ದದ್ದನ್ನು ಕಾಣಬಹುದೆಂದು ಶಂ. ಬಾ. ಹೇಳುತ್ತಾರೆ. ಸೂರ್ಯನೇ ಚಂದ್ರ, ನೀರಲ್ಲಿ ಅಡಗಿದ ಅಗ್ನಿ–ಸೂರ್ಯನೇ ಹಾವು ಇತ್ಯಾದಿ ಕಲ್ಪನೆಗಳಿಂದ ಪ್ರಜ್ಞೆಯ ಪ್ರತಿಷ್ಠೆಯನ್ನು ತದ್ವಿರುದ್ಧ ಸಮಯದವರು ಉಪಯೋಗಿಸಿಕೊಂಡಿದ್ದಾರೆ. ಕೆಲವರು ಭಾವಿಸಿದಂತೆ ಇದು ಪುರಾಣ ಕಾಲದ ಅಥವಾ ಅನಂತರದ ಕೈವಾಡವಾಗಿರದೆ ವೇದಗಳಲ್ಲಿಯೇ ಅನೇಕ ಋಷಿಗಳಿಂದ ಅಥವಾ ಅವರ ಹೆಸರಿನಲ್ಲಿ ನಡೆದ ವ್ಯಾಪಾರವೆಂದು ಶಂ. ಬಾ. ಅವರು ಅನೇಕ ವೇದ ಮಂತ್ರಗಳ ಮತ್ತು ನಮ್ಮ ಧಾರ್ಮಿಕ ದೈವತವಾಚಿ ಪದಗಳ ಇತಿಹಾಸ ಮತ್ತು ದಿವ್ಯಕಥೆಗಳ ಅರ್ಥ ವಿಶ್ಲೇಷಣೆಯಿಂದ ತೋರಿಸಿಕೊಡಲು ಯತ್ನಿಸಿದ್ದಾರೆ.

ಪ್ರಸ್ತುತ ಪುಸ್ತಕ ಶಂ. ಬಾ. ಅವರ ದೈವತ ಪ್ರತಿಮೆ ಮತ್ತು ಪದಗಳ ವಿಶ್ಲೇಷಣೆ ಮತ್ತು ಇತಿಹಾಸ ಪುನಾರಚನೆಯ ಯತ್ನಗಳನ್ನು ಒಂದು ನಿಲುಗಡೆಗೆ ತಂದಿದೆ. ಪ್ರಜ್ಞಾನುಯಾಯಿಯಾದ ಧರ್ಮವನ್ನು ಮನುವಿನ ಧರ್ಮವೆಂದೂ ಅದನ್ನು ಪ್ರತಿಪಾದಿಸಿದವನು ಪುರಾಣ ಪುರುಷ ವೈವಸ್ವತ (ವಿವಸ್ವಾನ್ = ಸೂರ್ಯ) ಮನುವೇ ಎಂದೂ ಆ ಮನುವನ್ನು ಮುಚ್ಚಿಹಾಕಿ ಚಂದ್ರಾರಾಧಕ ರಾತ್ರಿ ಸಮಯದ ಅನುಯಾಯಿಗಳು ಸ್ವಾಯಂಭುವ (ಕಾರ್ಯಕಾರಣಭಾವಕ್ಕೆ ಒಳಪಡದ) ಮನುವಿನ ಸೃಷ್ಟಿ ಮಾಡಿದರೆಂದೂ ಹಿಂದಿನ ಪುಸ್ತಕದಲ್ಲಿ ಡಾ. ಜೋಶಿಯವರು ವಾದಿಸಿದ್ದರು. ಈ ಪುಸ್ತಕದಲ್ಲಿ ಅವರು ಇದೇ ವಿಷಯವನ್ನು ಮುಂದುವರಿಸಿ ಪ್ರಜ್ಞೆ ಮತ್ತು ಬುದ್ಧಿ ಇವುಗಳ ಅಂತರವನ್ನು ವಿವೇಚಿಸಿದ್ದಾರೆ. ಮನುಷ್ಯನಲ್ಲಿ ಪ್ರಜ್ಞೆಯ ಉದಯ ಮುಂಚಿನದು ಮತ್ತು ಅದೇ ಅವನನ್ನು ನರತ್ವದಿಂದ ಮನುಷ್ಯತ್ವಕ್ಕೆ ಎತ್ತಿದ್ದು; ಅದೇ ಹೆಚ್ಚು ಮೂಲಭೂತವಾದದ್ದು. ಬುದ್ಧಿ (ಬುದ್ಧಿ = **reason, intelligence**) ಅನಂತರದ್ದು; ಮೂಲಭೂತವಾದದ್ದಲ್ಲ ಎಂದು ಗ್ರೀಕ ಮತ್ತು ಭಾರತೀಯ

ಪರಂಪರೆಗಳ ಮತ್ತು ಪ್ರತಿಮೆಗಳ ತುಲನಾತ್ಮಕ ವಿಶ್ಲೇಷಣೆಯಿಂದ ಪ್ರತಿಪಾದಿಸಿದ್ದಾರೆ. ಈ ತೀರ್ಮಾನದ ತಾತ್ವಿಕ ಪರಿಣಾಮಗಳನ್ನೂ ಅವರು ಚರ್ಚಿಸಿದ್ದಾರೆ.

ನಮ್ಮ ಪರಂಪರೆಯ ಬಹುಭಾಗವನ್ನು ನಿರಾಕರಿಸಿ, ಖಂಡಿಸಿ, ಶಂ. ಬಾ. ಅವರು ಶ್ರದ್ಧಾವಂತರನ್ನು ಎದುರು ಹಾಕಿಕೊಂಡಿದ್ದರೂ ಅವರು ನಾಸ್ತಿಕರಲ್ಲ. ಅವರ ಆಸ್ತಿಕತ್ವದ ಕೇಂದ್ರಾಂಶವೆಂದರೆ ನರತ್ವದಿಂದ ಮಾನವತ್ವಕ್ಕೇರಿದ ಈ ದ್ವಿಪಾತ್ ಜೀವಿಯ ಭವಿತವ್ಯ. ಮಾನವತ್ವದಲ್ಲೇ ಆತ ಮುಂಪುವರಿಯಬೇಕೆಂಬುದು ಅವರ ಕಳಕಳಿ. ದೈವತ ಪ್ರತಿಮೆಗಳೂ ಪುರಾಣ ಕಲ್ಪನೆಗಳೂ ಧಾರ್ಮಿಕ ಪದಗಳೂ ಎಲ್ಲಿಂದಲೋ ಹೇಗೋ ಸ್ವಯಂಭುವಾಗಿ ಉದಿಸಿದವುಗಳಲ್ಲ. ಅವು ಆತನ ಆದರ್ಶಗಳ ರೂಪಕೋಕ್ತಿಗಳಾಗಿದ್ದು ಮನುಷ್ಯನ 'ಆತ್ಮ'ದಲ್ಲಿ ಗಹನವಾದ ಪ್ರಭಾವ ಹೊಂದಿದವಾಗಿವೆ. ಈ ಪ್ರತಿಮೆಗಳು ಬದಲಾದರೆ ಸಂಗಡವೇ ಗಾಢವಾದ ಆಂತರಿಕ ಬದಲಾವಣೆಗಳು ಸಂಸ್ಕೃತಿಯಲ್ಲಿ ಗೋಚರವಾಗುತ್ತವೆ. ಅವು ಮನುಷ್ಯನ ಭವಿಷ್ಯದ ದಾರಿಯನ್ನು ಬದಲಿಸುತ್ತವೆ. ಅವನು–ವಿಶೇಷವಾಗಿ ಭಾರತೀಯ ಮಾನವನು–ಪ್ರಜ್ಞೆಯ ಆದಿಮ ದಾರಿಯನ್ನು ತೊರೆದು ರಾತ್ರಿ, ಚಂದ್ರ, ಕೃಷ್ಣ, ನಾಗ ಇತ್ಯಾದಿ ಪ್ರತಿಮೆಗಳಿಂದ ಪ್ರತೀಯಮಾನವಾದ ಅಂಧಕಾರದ ನರತ್ವಮಾರ್ಗಕ್ಕೆ ಜಾರಿದ್ದು ಅವನ ಅಧೋಗತಿಗೆ ಕಾರಣವೆಂದು ನಂಬುವ ಶಂ. ಬಾ ಅವರು ಪ್ರಜ್ಞೆಯ ಪುನಃ ಪ್ರತಿಷ್ಠೆಯಾಗಬೇಕೆಂದು ಬಯಸುತ್ತಾರೆ.

ಡಾ|| ಶಂ. ಬಾ. ಜೋಶಿಯವರ ಕೆಲವು 'ಆಸ್ತಿಕ' ವಿಚಾರಗಳು ಎತ್ತಿ ಹೇಳಬೇಕಾದವು ಅನಿಸುತ್ತದೆ. ಅವರು ಮನುಷ್ಯನ ಇತಿಹಾಸದ ಅ–ಕಾರವೆನಿಸುವ ಪ್ರಜ್ಞೆ ಲೋಕೋತ್ತರವಾದದ್ದೆಂದು ಭಾವಿಸುತ್ತಾರೆ. ಆದ್ದರಿಂದ ಮಾನವನ ಮಾನವತ್ವವನ್ನು 'ದೈವೀಸಂಕಲ್ಪ' ಅಥವಾ 'ವಿಶ್ವಸಂಕಲ್ಪ'ವೆಂದೂ ಬಗೆಯುತ್ತಾರೆ. ಅನೇಕ ಧಾರ್ಮಿಕ ಪುರುಷರಂತೆ ಅವರೂ ರಾತ್ರಿಯನ್ನು ಹಗಲು ಮಾಡಿ ತೋರಿಸಬಲ್ಲ 'ಬುದ್ಧಿ'ಯನ್ನು ಮೂಲಭೂತದ್ದೆಂದು ನಂಬುವುದಿಲ್ಲ. ಪ್ರಜ್ಞೆಯನ್ನು–ವೈಶ್ವಾನರತ್ವವನ್ನು ಗಮನಿಸದ, ಅತಿ ವೈಯಕ್ತಿಕತೆ ಗಂಡಾಂತರಕಾರಕವೆಂದು ಅವರು ಭಾವಿಸುವುದರಿಂದ ಇಂದಿನ ಪಾಶ್ಚಾತ್ಯ ನಾಗರಿಕತೆಯ ಬಹುಪಾಲು ವರ್ತನೆ ಅವರನ್ನು ಕೆರಳಿಸುತ್ತದೆ. ಆದರೂ 'ವಿಶ್ವ

ಸಂಕಲ್ಪ'ವೆಂದು ಕರೆಯಬಹುದಾದ ಮಾನವನ ಭವಿತವ್ಯತೆಯ ಬಗೆಗೆ ಅವರ ವಿಶ್ವಾಸ ಬಲವಾಗಿರುವುದರಿಂದ ಮಾನವ ತನ್ನನ್ನು ತಿದ್ದಿಕೊಳ್ಳಬಲ್ಲ–ತಿದ್ದಿ ಕೊಳ್ಳುತ್ತಾನೆ ಎಂದೂ ಅವರು ನಂಬುತ್ತಾರೆ.

ನಾನು ಕಂಡಂತೆ ಇದು ಶಂ. ಬಾ. ನಿಲುವೆ. ಈ ತಾತ್ವಿಕ ತೀರ್ಮಾನ ಗಳಿಗೆ ಬರಲು ಅವರು ಅನುಸರಿಸಿದ ಪದ, ದೈವತ ಪ್ರತಿಮೆ, ಧಾರ್ಮಿಕ ಸಂಕೇತ, ಪುರಾಣ ಕಥೆ ಮುಂತಾದವುಗಳ ವಿಶ್ಲೇಷಣ ವಿಧಾನ ಮತ್ತು ತಮ್ಮ ನಿಗಮನಗಳ ಪರಿಣಾಮಗಳ ಬಗ್ಗೆ ಅವರಿಗಿರುವ 'ಶಕ್ತಿ (Commitment) ಇವುಗಳಿಂದಾಗಿ ಅವರು ಅಗತ್ಯಕ್ಕಿಂತ ಹೆಚ್ಚು ವಿವಾದಾಸ್ಪದ ವ್ಯಕ್ತಿಯಾಗಿ ದ್ದಾರೆ. ಅವರು ಅನುಸರಿಸಿರುವ ಸಂಶೋಧನ ವಿಧಾನವೂ ವಿಷಯವೂ ಈ ದೇಶದಲ್ಲಂತೂ ತೀರ ಹೊಸದಾಗಿರುವುದರಿಂದ ಅದು ಕೆಲವರಿಗೆ ಕಗ್ಗಂಟು; ಮಧ್ಯಪ್ರಾಚ್ಯ ಮತ್ತು ಪಾಶ್ಚಾತ್ಯ ದೇಶಗಳಲ್ಲಿನ ಹಾಗೆ ಮತಾಂತರಶೀಲ ಧರ್ಮಗಳು ಈ ದೇಶವನ್ನು ಸ್ವಾಹಾಕರಿಸಿ ಹಳೇಪುರಾಣ ಕಥೆ, ಕಲ್ಪನೆ, ಪ್ರತಿಮೆ ಗಳನ್ನು ಅಳಿಸಿ ಹಾಕದಿರುವುದರಿಂದ ಮತ್ತು ಆ ದೇವತಾದಿಗಳು ಇನ್ನೂ ಜನ ರಿಗೆ ಆರಾಧ್ಯವಾಗಿರುವುದರಿಂದ ಅವರ ತೀರ್ಪುಗಳು ಹಲವರಿಗೆ ಪಾಷಂಡತನ. ಹೀಗೆ ಶಂ. ಬಾ. ಅವರ ಬಗ್ಗೆ ತಿಳಿವಳಿಕೆಗಿಂತ ತಪ್ಪು ತಿಳಿವಳಿಕೆಯೇ ಹೆಚ್ಚಾಗಿದೆ.

ಡಾ|| ಶಂ. ಬಾ. ಜೋಶಿಯವರ ದಶಕಗಳ ಪರಿಶ್ರಮಕ್ಕೆ ನಿಜವಾದ ಪ್ರತಿ ಫಲ ಕೊಡಬೇಕೆಂದಿದ್ದರೆ ಅವರು ಆರಿಸಿಕೊಂಡ ಸಂಶೋಧನ ರಂಗಗಳಲ್ಲಿ ಹೆಚ್ಚು ಜನ ಧೀಮಂತರು ಪ್ರವೇಶಿಸಬೇಕು. ಹಾಗಾದರೆ ಅವರ ತೀರ್ಪುಗಳು ಯಾವ ತರಹವಾದರೂ ಶಂ. ಬಾ. ಅವರ ಶ್ರಮ ಸಾರ್ಥಕವಾದಂತೆಯೆ.

# ಪ್ರಸ್ತಾವನೆ

ಡಾ. ಶಂ. ಬಾ. ಜೋಶಿ ಅವರು ಭಾರತೀಯ ಸಂಸ್ಕೃತಿಯಲ್ಲಿಯ ಸತ್ಯಾನ್ವೇಷಣೆಯ ಕಾರ್ಯ ಕೈಕೊಂಡು ಅಪ್ರಿಯ ಸತ್ಯ ಹೊರತೆಗೆಯುತ್ತಿರುವ ಧೀರ ಸಂಶೋಧಕರು. 'ಹಾಲುಮತ ದರ್ಶನ' (೧೯೬೬)ದ ಪ್ರಕಟನೆಯೊಂದಿಗೆ ಅವರ ಅನ್ವೇಷಣೆ ವೇದ, ಪುರಾಣ, ರಾಮಾಯಣ, ಮಹಾಭಾರತಗಳ ಆಳಕ್ಕಿಳಿದು ಜಿಜ್ಞಾಸುಗಳಿಗೆ ಹೊಸ ಕ್ಷಿತಿಜ ತೋರಿಸಿತು. ಅವರ ಇತ್ತೀಚಿನ ಪ್ರಕಟನೆಗಳಾದ 'ಪ್ರವಾಹ ಪ್ರತಿತರ ಕರ್ಮ: ಹಿಂದೂ ಎಂಬ ಧರ್ಮ' (೧೯೭೬) 'ಶ್ರೀಮತ್ ಭಗವತ್ ಗೀತೆಯ ಆ–ಶಯ: ರಾಜಯೋಗದ ಗುಹ್ಯಜ್ಞಾನ (೧೯೭೭) ಗ್ರಂಥಗಳು ಪರಂಪರಾ ಪ್ರಿಯರ ಶ್ರದ್ಧಾಸ್ಥಾನಗಳ ಮೇಲೆ ಬಲವಾದ ಪೆಟ್ಟು ಹಾಕಿದವು. ಕಳೆದ ವರ್ಷ ಪ್ರಕಟವಾದ 'ವೈವಸ್ವತಮನು ಪ್ರಣೀತ ಮಾನವ ಧರ್ಮದ ಆಕೃತಿ' ಗ್ರಂಥವು ಈ ವರೆಗಿನ ಅವರ ಗ್ರಂಥಗಳೆಲ್ಲದರಲ್ಲಿ ಪ್ರತಿಪಾದಿತವಾದ ಹೊಸ ಹೊಸ ವಿಚಾರಗಳಿಗೆ ಖಚಿತ ರೂಪಕೊಡುವ ಕ್ರಾಂತಿಕಾರಕ ನಿಷ್ಕರ್ಷಗಳನ್ನು ಹೊರಹೊಮ್ಮಿಸಿರುವ ಮಹೋನ್ನತ ಗ್ರಂಥವಾಗಿದೆ. ಸಂಪ್ರದಾಯವಾದಿಗಳಿಗೆ ಸಿಂಹಸ್ವಪ್ನರಾಗಿರುವ ಡಾ. ಶಂ. ಬಾ. ಅವರ ಸತ್ಯಾನ್ವೇಷಣೆಯಿಂದ ಹೊರಬಂದಿರುವ ಹೊಸ ವಿಚಾರಗಳು ಧಾರ್ಮಿಕ ಅಂಧಾಭಿಮಾನಿಗಳಿಗೆ ನುಂಗಲಾರದ ತುತ್ತುಗಳು.

ಡಾ. ಶಂ. ಬಾ. ಅವರು ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿಯ 'ಪವಿತ್ರ' ಗ್ರಂಥಗಳಲ್ಲಿಯ ಅಂತರ್ ವಿಸಂಗತಿಗಳ ಬಗ್ಗೆ, ಕಣ್ಕಟ್ಟಿನ ಬಗ್ಗೆ ವಿವರಿಸಿ ಹೇಳಿರುವ ಅಂಶಗಳ ಕುರಿತು, ನಿಷ್ಕರ್ಷಗಳ ಕುರಿತು ವಿಮರ್ಶಕರು ಸಹಮತವನ್ನಾದರೂ ಸೂಚಿಸಬೇಕು; ಇಲ್ಲವೆ ಸಾಧಾರಣವಾಗಿ ಭಿನ್ನಾಭಿಪ್ರಾಯ ವ್ಯಕ್ತಪಡಿಸಿ ಎಡವಿದ ಎಡೆಗಳನ್ನು ಬೆರಳಿಟ್ಟು ತೋರುವುದನ್ನಾದರೂ ಮಾಡಬೇಕು. ಇದು ಆರೋಗ್ಯಕರವಾದ ವಿಮರ್ಶೆಯ ರೀತಿ. ಹೀಗೆ ಮಾಡದೆ, ವೈಯಕ್ತಿಕ ದೋಷಾರೋಪಣೆ, ತೇಜೋವಧೆ ಮಾಡುತ್ತಿರುವುದು ಮಾತ್ರ ವಿಷಾದನೀಯ.'

'ವೈವಸ್ವತಮನು ಪ್ರಣೀತ ಮಾನವಧರ್ಮದ ಆಕೃತಿ' ಗ್ರಂಥದಲ್ಲಿ ಡಾ. ಶಂ. ಬಾ. ಜೋಶಿ ಅವರ ಅನ್ವೇಷಣೆಯಿಂದ ಹೊರಬಂದಿರುವ ನಿಷ್ಕರ್ಷಗಳನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು :

೧ ವಾನರ ಹಂತದ ತರುವಾಯವೇ ಮಾನವರ ವಿಕಾಸವಾಯ್ತು ಎಂಬಲ್ಲಿ ಡಾರ್ವಿನ್ ಜಾರಿದ್ದಾನೆ. ವಾನರ ಮತ್ತು ಮಾನವ ಇವೆರಡು ಹಂತಗಳ ನಡುವೆ ಇನ್ನೊಂದು ಘಟ್ಟ ಇರಬೇಕು. ಈ 'Missing link' ಎಂದರೆ 'ನರ'. ಜಾಗತಿಕ ಪಾತಳಿಯ ಮೇಲಣ ಮೋಕ್ಷಕಾಮಿ ನರಸಂಪ್ರದಾಯಗಳು ಆ ಮೂಲ ಪರಂಪರೆಯ ಉತ್ತರಾಧಿಕಾರಿಗಳಾಗಿವೆ.

೨ ವೈವಸ್ವತಮನುವನ್ನು ಪ್ರತಿಭಟಿಸಿ ಸ್ವಯಂಭೂ ಮನು ಸಂಪ್ರದಾಯವು ಎಲ್ಲೆಲ್ಲೂ ಪ್ರಭಾವಶಾಲಿಯಾಗಿ ಇಂದು ಮೆರೆಯುತ್ತಿದೆ.

೩ ವೇದ ಸುಳ್ಳನ್ನು ನಂಬಹಚ್ಚಿದೆ.

೪ ರಾಮಾಯಣ, ಮಹಾಭಾರತ, ಪುರಾಣಾದಿಗಳು ಅಂತರ್ ವಿಸಂಗತಿಗಳಿಂದ ಕೂಡಿವೆ; ಮಾನವಧರ್ಮವನ್ನು ನಷ್ಟ ಮಾಡಿ, ಮೋಕ್ಷಕಾಮಿ ನರ ಧರ್ಮ ಎತ್ತಿಕಟ್ಟಲು ವ್ಯವಸ್ಥಿತ ರೀತಿಯಿಂದ ರಚನೆಗೊಂಡಿವೆ.

೫ ಜೀವನ್ಮುಕ್ತಿಯನ್ನು ಪ್ರತಿಪಾದಿಸುವ ಸನ್ಯಾಸಿ–ಸಂತರು ಉನ್ಮಾದಕ್ಕೊಳಗಾಗಿ ಸತ್ಯವನ್ನು ಅರಿಯಲಾರದ ಅಜ್ಞರು; ಇಲ್ಲವೆ ವಂಚಕರು !

೬ ಪರಂಪರೆಯ ಕಣ್ಕಟ್ಟನ್ನು ಅರಿಯದೇ ತತ್ತ್ವಜ್ಞಾನ ಪ್ರತಿಪಾದಿಸಿರುವ ರಾಮಕೃಷ್ಣ ಪರಮಹಂಸ, ಅರವಿಂದ, ಟಿಳಕ, ಗಾಂಧೀ, ರಾಧಾಕೃಷ್ಣನ್ ಮೊದಲಾದವರೆಲ್ಲ ಮರುಳರು; ಅರಿತು ಪ್ರತಿಪಾದಿಸಿದ್ದರೆ ಮೋಸಗಾರರು.

೭ ಭಾರತೀಯರು ಧರ್ಮಗ್ರಂಥಗಳ ಸಮ್ಮೋಹನಕ್ಕೆ ಒಳಗಾಗಿದ್ದಾರೆ; ಅವರ ತಲೆ ತಿರುಗಿ ಹೋಗಿದೆ ! (Brain wash ಆಗಿದೆ !) ಅಂದರೆ, ಭಾರತದಲ್ಲಿ ಸಾಂಸ್ಕೃತಿಕ ತಿರುವುಮುರುವು ಉಂಟಾಗಿದೆ; ಸಾಂಸ್ಕೃ

ತಿಕ ಪಲ್ಲಟವಾಗಿದೆ. ಈ ಸಾಂಸ್ಕೃತಿಕ ಪಲ್ಲಟವೇ ಭಾರತೀಯರ ಅವನತಿಗೆ ಕಾರಣವಾಗಿದೆ.

- ಭಾರತೀಯರು ತಮ್ಮ ಮೂಲ ಪರಂಪರೆಯನ್ನು ಅರಿತು, ಅದನ್ನು ಆಚರಣೆಯಲ್ಲಿ ತಂದಾಗ ಮಾತ್ರ ಅವರ ಉದ್ಧಾರ ಸಾಧ್ಯ.
- 'ವೈವಸ್ವತಮನು ಪ್ರಣೀತ ಮಾನವಧರ್ಮ' ಇದು ಭಾರತೀಯರ ಧಾರ್ಮಿಕ ಪರಂಪರೆಯ ಮೂಲ ಹೆಸರು.
- ಪ್ರಪಂಚದಲ್ಲಿ ಧರ್ಮ ಅನ್ನುವುದಿದ್ದರೆ, ಅದು 'ಮಾನವಧರ್ಮ' ಒಂದೇ. ಮಾನವಧರ್ಮಿ ಅಲ್ಲದವನು ನರಧರ್ಮಿ ಆಗಲೇಬೇಕು.

ಇವು 'ವೈವಸ್ವತಮನು ಪ್ರಣೀತ ಮಾನವಧರ್ಮದ ಆಕೃತಿ'ಯಲ್ಲಿಯ ಅತ್ಯಂತ ಮಹತ್ತ್ವದ ನಿಷ್ಕರ್ಷಗಳು. ಈ ನಿಷ್ಕರ್ಷಗಳಿಗೆ ಪೂರಕವಾಗಿ ಡಾ. ಶಂ. ಬಾ. ಅವರು ಭಾರತೀಯ 'ಪವಿತ್ರ' ಗ್ರಂಥಗಳಲ್ಲಿಯ ಅಂತರ್–ವಿಸಂಗತಿಗಳನ್ನು ಎತ್ತಿ ತೋರಿಸಿದ್ದಾರೆ; ಜಾಗತಿಕ ತತ್ತ್ವಜ್ಞಾನ ಪರಂಪರೆಯಲ್ಲಿಯ ಸಾಮ್ಯಸ್ಥಾನಗಳನ್ನು ಹುಡುಕಿ ತೆಗೆದು ತಮ್ಮ ಅಭಿಪ್ರಾಯಗಳನ್ನು ಪ್ರತಿಪಾದಿಸಿದ್ದಾರೆ. ಮತ್ತು ಆಧುನಿಕ ಜ್ಞಾನಶಾಖೆಗಳಾದ ಜೈವಿಕಶಾಸ್ತ್ರ, ಮನಶ್ಶಾಸ್ತ್ರ, ದೈವಾಧ್ಯಾತ್ಮ ಸಂಕೇತ ವಿವೇಚನಾಶಾಸ್ತ್ರ, ಭಾಷಾಶಾಸ್ತ್ರ, ಸಾಹಿತ್ಯ ವಿಮರ್ಶೆ, ತತ್ತ್ವಶಾಸ್ತ್ರ, ಮಾನವಶಾಸ್ತ್ರ ಇತ್ಯಾದಿಗಳಿಂದ ತಮ್ಮ ಪ್ರತಿಪಾದನೆಗೆ ಪೋಷಣೆ ಪಡೆದಿದ್ದಾರೆ.

ವಿಮರ್ಶಕರು ಡಾ. ಶಂ. ಬಾ. ಅವರ '....ಮಾನವಧರ್ಮದ ಆಕೃತಿ' ವಿಮರ್ಶೆ ಮಾಡುವಾಗ ಮೇಲೆ ಹೇಳಲಾಗಿರುವ ಅವರ ನಿಷ್ಕರ್ಷಗಳ ಕುರಿತು ತಮ್ಮ ಸಮ್ಮತಿ ಇಲ್ಲವೆ ಅಸಮ್ಮತಿ ವ್ಯಕ್ತಪಡಿಸಿ ವಿಮರ್ಶಿಸದೇ, ಅಲ್ಲಿಯ ಮಹತ್ತ್ವದ ಅಂಶಗಳನ್ನೆಲ್ಲ ಅಲಕ್ಷಿಸಿ, ಕೇವಲ ದೋಷಾರೋಪಣೆ ಮಾಡುತ್ತ ಹೋಗಿರುವುದು ಶೋಚನೀಯ. ಲೇಖಕರ ನಿಷ್ಕರ್ಷಗಳು ವಿಮರ್ಶಕರಿಗೆ ದೋಷಪೂರ್ಣವಾಗಿ ಕಂಡರೆ, ಇಂಥ ನಿಷ್ಕರ್ಷ ಈ ಕಾರಣಗಳಿಗಾಗಿ ಸರಿಯಲ್ಲವೆಂದು ವಿವರಿಸಿ, ಸತ್ಯಾನ್ವೇಷಣೆಯ ಕಾರ್ಯದಲ್ಲಿ ನೆರವಾಗುವ ಶ್ರಮ ತೆಗೆದುಕೊಳ್ಳದೆ, "........ಇದು ವರೆಗೆ ಯಾವ ವಿಖ್ಯಾತ ವಿದ್ವಾಂಸರೂ ಪೂರ್ಣವಾಗಿ ಒಪ್ಪದ ಅನೇಕ ವಿಸಂಗತಿಗಳತ್ತ ಈ ಲೇಖಕರು ತಮ್ಮ ಸ್ವೋಪಜ್ಞ ವ್ಯಾಖ್ಯೆಗಳನ್ನು ನೀಡುತ್ತ ಸಾಗುತ್ತಾರೆ. –'ನಡೆದುದೇ

ಮಾರ್ಗಂ, ಪದವಿಟ್ಟುದೇ ಭಂಗಿ'[1]" ಎಂಬುದಾಗಿ ಡಾ. ಕೆ. ಕೃಷ್ಣಮೂರ್ತಿಯವರು ವಿಡಂಬಿಸಿದ್ದಾರೆ.

ಭಾರತೀಯರು ತಲೆಯ ಮೇಲೆ ಇಟ್ಟುಕೊಂಡು ಕಣ್ಣು ಮುಚ್ಚಿಕೊಂಡಿರುವ 'ಪವಿತ್ರ' ಗ್ರಂಥಗಳು ಹೇಗೆ ವೈವಸ್ವತ ಸತ್ಯವನ್ನು ಬುದ್ಧಿಪೂರ್ವಕವಾಗಿ ಮರೆಮಾಚಿವೆಯೆಂಬುದನ್ನು ಉದಾಹರಣೆಗಳೊಂದಿಗೆ ಡಾ. ಶಂ. ಬಾ. ಅವರು ಪ್ರತಿಪಾದಿಸಿ ವ್ಯಾಸ, ವಾಲ್ಮೀಕಿ, ವಶಿಷ್ಟಾದಿಗಳೆಲ್ಲ ಹೇಗೆ ಧೂರ್ತರು ಮತ್ತು ವಂಚಕರೆಂಬುದನ್ನೂ ಸಾಧಾರವಾಗಿ ಪ್ರತಿಪಾದಿಸಿದ್ದಾರೆ. ಹೀಗಿದ್ದರೂ "....ವ್ಯಾಸ, ವಾಲ್ಮೀಕಿ, ವಶಿಷ್ಟಾದಿಗಳೆಲ್ಲ ಭಂಡರು, ಧೂರ್ತರು ಮತ್ತು ವಂಚಕರು ಎಂಬುದು ಇವರ ದೃಷ್ಟಿಗೆ ಸ್ವತಸಿದ್ಧ[2]" ಎಂದು ಹೇಳಿ, ಲೇಖಕರ ನಿಷ್ಕರ್ಷ ನಿರಾಧಾರವೆಂದು ಸೂಚಿಸಲು ಹವಣಿಸಿರುವುದು ವಿದ್ವಾಂಸರಾದ ವಿಮರ್ಶಕರಿಗೆ ಶೋಭಿಸುವುದಿಲ್ಲವೆಂದು ವಿಷಾದದಿಂದ ಹೇಳಬೇಕಾಗುತ್ತದೆ. ಸತ್ಯಾನ್ವೇಷಣೆಯಲ್ಲಿ ತೊಡಗಿದಾಗ ನಮ್ಮ ನಂಬಿಕೆಗಳಿಗೆ, ಸಂಪ್ರದಾಯಗಳಿಗೆ ವಿರುದ್ಧವಾದ ನಿಷ್ಕರ್ಷಗಳು ಹೊರಬಂದರೆ ಅಂಥವುಗಳನ್ನು ಸ್ವಾಗತಿಸುವ ಮನೋವೈಶಾಲ್ಯ ವಿದ್ವಾಂಸರೆನ್ನಿಸಿಕೊಂಡವರಲ್ಲಿ ಅತ್ಯಗತ್ಯವಾಗಿ ಬೇಕೆಂದು ಸೂಚಿಸಬೇಕಾಗುತ್ತದೆ.

ಪ್ರೊ. ಕೆ. ಎಸ್. ನಾರಾಯಣಾಚಾರ್ಯರು ಬರೆದ್ದ[3] ವಿಮರ್ಶೆಯು ಪೂರ್ವಗ್ರಹ ಪೀಡಿತವಾಗಿದ್ದು, ಅದು ಕೃತಿ ವಿಮರ್ಶೆಯಾಗಿರದೇ ವೈಯಕ್ತಿಕ ದೋಷಾರೋಪಣೆಯಾಗಿದೆ. ಡಾ. ಶಂ. ಬಾ. ಜೋಶಿಯವರ ನಿಷ್ಕರ್ಷಗಳೊಂದರ ಬಗ್ಗೆಯೂ ಪರಿಶೀಲಿಸದೇ, ಒರೆಗೆ ಹಚ್ಚದೆ ಕೇವಲ ವೈಯಕ್ತಿಕ ತೇಜೋವಧೆ ಮಾಡುವ ಕಾರ್ಯವನ್ನು ಮಾತ್ರ ಮಾಡಲಾಗಿದೆ. ಇದೆಲ್ಲಕ್ಕೂ ಕಳಸವಿಡುವಂತೆ "....ಇಂಥ ಪುಸ್ತಕಗಳನ್ನು ಬರೆದು ಮುದ್ರಿಸುತ್ತಾ ಹೋಗುವುದರಿಂದ ಕಾಲದ್ರವ್ಯಗಳ ಅಪವ್ಯಯವೇ ಆಗುವ ಸಂಭವ ಇದೆಯೆಂದು ವಿಧಿಯಿಲ್ಲದೆ ಹೇಳಬೇಕಾಗಿದೆ" ಎಂದು ಅಪ್ಪಣೆ ಕೊಡುವ ಧೈರ್ಯ ಮಾಡಿದ್ದಾರೆ. ಇದು

1 ಪ್ರಜಾವಾಣಿ : ೧೮–೫–೧೯೮೦.

2 ಅದೇ

3 ಸಂಯುಕ್ತ ಕರ್ನಾಟಕ (ದಿನಾಂಕ ೪–೫–೧೯೮೦).

ವಿಮರ್ಶೆಯ ರೀತಿಯೇ? ಪ್ರಾಜ್ಞರು ಯೋಚಿಸಬೇಕು. ಪ್ರೊ. ಕೆ. ಎಸ್. ನಾರಾಯಣಾಚಾರ್ಯರ ವಿಮರ್ಶೆಯು ಸಾಂಪ್ರದಾಯಿಕ ನಂಬುಗೆಗಳ ಮೇಲೆ, ಶ್ರದ್ಧಾಸ್ಥಾನಗಳ ಮೇಲೆ ಬಿದ್ದ ಹೊಡೆತಗಳ ಆಘಾತ ತಾಳಲಾರದೆ, ಮಾಡಿರುವ ಆಕ್ರೋಶ ಮಾತ್ರವಾಗಿದೆಯೆಂಬಲ್ಲಿ ಸಂಶಯವಿಲ್ಲ.

ಡಾ. ಶಂ. ಬಾ. ಜೋಶಿ ಅವರು ಕಣ್ಣು ಕುಕ್ಕಿಸುವ ಹೊಸ ವಿಚಾರಗಳನ್ನು ಪ್ರತಿಪಾದಿಸುತ್ತಲಿರುವುದರಿಂದ ಕರ್ನಾಟಕದ ಅಸಾಮಾನ್ಯ ಸಂಶೋಧಕರೆಂಬ ಅವರ ಸ್ಥಾನವನ್ನು ಅಲುಗಿಸುವುದು ಪರಂಪರಾಪ್ರಿಯರಿಗೆ ಸಾಧ್ಯವಾಗಿಲ್ಲ. ಪ್ರಾಸಂಗಿಕವಾಗಿ ಅವರ ಹಿರಿಮೆಯನ್ನು ಒಪ್ಪಿಕೊಳ್ಳಲೇಬೇಕಾದ ಅನಿವಾರ್ಯತೆ ಕೆಲವರನ್ನು ಕಾಡಿದೆ. ಅಂಥ ಪ್ರಸಂಗಗಳಲ್ಲಿ ತಮ್ಮ ಪೂರ್ವೋಕ್ತ ಮಾತುಗಳಿಗೆ ವ್ಯತಿರಿಕ್ತವಾದ ಮಾತುಗಳನ್ನು ಅನಂತರ ಬರೆದಿರುವುದರಿಂದ ವಿರೋಧಾಭಾಸ ವ್ಯಕ್ತವಾಗಿರುವುದೂ ಉಂಟು.

ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರು "Dr. Joshi's writings cannot be classed as models of scientific dissertations. The arguments frequently loose their main thread, meander into realms of fictive fancy and reveal in emotional excursions Quite frequently persuit after the etymological possibilities becomes as port for him, and he cannot be taken seriously. ಎಂಬುದಾಗಿ ಡಾ. ಶಂ. ಬಾ. ಅವರ ಸಾಧನೆಯನ್ನು ಸ್ಪಷ್ಟ ಮಾತುಗಳಲ್ಲಿ ಖಂಡಿಸುತ್ತಾರೆ.[4] ಕೂಡಲೇ ಅಪರಾಧಿ ಪ್ರಜ್ಞೆ (guilty conciousness) ಜಾಗೃತಗೊಂಡವರಂತೆ "But it can not be denied that he has some essential insights, and that his books contain material that can sustain several research projects. He has shaken the complacent foundations of customary research with regard to his dimensions of culture, particularly of the Kannad country. And he has gathered a wealth of relevant data which can be utilised fruitfully in subsequent research programmes.[5]

---

4 Deccan Herald (November 2, 1980).

5 ಅದೇ

ಇಲ್ಲಿಯ ವಿರೋಧಾಭಾಸಯುಕ್ತ ಹೇಳಿಕೆಗಳು ಲೇಖಕರಿಗೆ ಡಾ. ಶಂ. ಬಾ. ಜೋಶಿ ಯವರ ವಿಚಾರಗಳು ನುಂಗಲು ಸಾಧ್ಯವಾಗದ, ಉಗುಳಲೂ ಮನಸ್ಸೊಪ್ಪದ ಬಿಸಿತುಪ್ಪದಂತಾಗಿವೆಯೆಂದು ಯಾರಿಗಾದರೂ ಅನಿಸುತ್ತದೆ. '...'he can not be taken seriously' ಎಂಬುದಾಗಿ ಹೇಳಿ, ತಕ್ಷಣವೇ '....he has some essential insights, and that his books contain material that can sustain several research projects' ಎಂದು ಹೇಳಿರುವುದಲ್ಲದೇ ಇವರೊಬ್ಬ ಅತ್ಯಂತ ಉನ್ನತ ವ್ಯಕ್ತಿತ್ವದ ಗೊಮ್ಮಟನಂತೆ ಇದ್ದಾರೆಂಬ ಅರ್ಥದಲ್ಲಿ "He is in more ways than one a class by himself, colossus."[6] ಎಂಬುದಾಗಿಯೂ ಹೇಳುತ್ತಾರೆ. ಈ ರೀತಿಯ ಬರವಣಿಗೆಯು ಖಚಿತವಾಗಿಯೂ ಓದುಗರನ್ನು ತಪ್ಪುದಾರಿಗೆಳೆಯುವ ಚತುರತನವೆನ್ನದೆ ಗತಿಯಿಲ್ಲ. ಹೀಗೆ ಅಡ್ಡಗೋಡೆಯ ಮೇಲೆ ದೀಪವಿಡುವ ಕಾರ್ಯಮಾಡದೆ, ಡಾ. ಶಂ. ಬಾ. ಜೋಶಿ ಅವರ ಗ್ರಂಥಗಳಲ್ಲಿ ಸತ್ವಕಂಡರೆ ಇದೆಯೆಂದು ಹೇಳಬೇಕು. ಅಂದರೆ, ಅವರ ವ್ಯಕ್ತಿತ್ವದ ನೆಲೆ-ಬೆಲೆ ಗುರುತಿಸಿಕೊಳ್ಳಲು ಓದುಗರಿಗೆ ಸಹಾಯವಾಗುವದು.

ವಿದ್ವಾಂಸರೆನಿಸಿಕೊಳ್ಳುವವರು ಡಾ. ಶಂ. ಬಾ. ಜೋಶಿ ಅವರ ಬಗೆಗೆ ಪೂರ್ವಗ್ರಹ ಪೀಡಿತರಾಗಿರುವುದಕ್ಕೆ, ಒಂದೆಡೆ ಹೊಗಳಿದಂತೆ ಮಾಡಿ ಇನ್ನೊಂದೆಡೆಗೆ ಅಳತೆ ಮೀರಿ ತೆಗಳುವುದಕ್ಕೆ, ಅವರು ಪರಂಪರೆಯಲ್ಲಿಯ ಲೋಪದೋಷಗಳನ್ನು ನಿಷ್ಠುರವಾಗಿ ಬಯಲಿಗೆಳೆಯುವುದೇ ಕಾರಣವಾಗಿರಬಹುದು. ಆದರೆ, ಮುಕ್ತಮನಸ್ಸಿನಿಂದ, ವಸ್ತುನಿಷ್ಠ ದೃಷ್ಟಿಯಿಂದ ಡಾ. ಶಂ. ಬಾ. ಜೋಶಿ ಅವರ ಗ್ರಂಥಗಳನ್ನು ಓದಿದರೆ ಅವರ ವಿಚಕ್ಷಕ ವಿವೇಚನೆ ಸ್ಪಷ್ಟವಾಗುವುದು.

---

6 Deccan Herald (November 2, 1980)

# ಪ್ರಕರಣ ೧

# ಮಾನವನ ಇತಿಹಾಸದಲ್ಲಿ ಬುದ್ಧಿಯು ಅವತರಿಸಿರುವ ಹಿನ್ನೆಲೆ

## ಈ ಅನ್ವೇಷಣೆಯ ಪದ್ಧತಿಯನ್ನು ಕುರಿತು ಎರಡು ಮಾತು

### I

ಬುದ್ಧಿ, ಮತ್ತು ಮನಸ್ಸು ಇದನ್ನು ಕುರಿತು ಆಧುನಿಕ ಶಾಸ್ತ್ರಜ್ಞರು, ತತ್ತ್ವಜ್ಞರೂ, ಮಾನವ ಶಾಸ್ತ್ರಜ್ಞರೂ ಆಳವಾಗಿ, ಕೂಲಂಕಷವಾಗಿ ವಿಚಾರ, ವಿಮರ್ಶೆ ನಡೆಸಿಯೇ ಇದ್ದಾರೆ. ಆದರೆ, 'ಬುದ್ಧಿ' (Reason, Intelligence) ಇದು, ಮೈವೆತ್ತ ಸಮಯ ಪರಿಸರವನ್ನು ನಿದರ್ಶನಕ್ಕೆ ತರುವ ಉಲ್ಲೇಖಗಳು, ಪುರಾತನ ಪರಂಪರೆಯ ಧಾರ್ಮಿಕ ತಾತ್ತ್ವಿಕ 'ಪವಿತ್ರ' ಗ್ರಂಥಗಳಲ್ಲಿ ಅಲ್ಲಲ್ಲಿ ಹುದುಗಿರುವುದು ಗಮನಕ್ಕೆ ಬಂದಾಗ, ಇವನ್ನೆಲ್ಲ ಕ್ರೋಢೀಕರಿಸಿ, ಸಮಸಾಮಯಿಕ ಪ್ರತಿಮೆ, ಪ್ರತೀಕಗಳ ತೌಲನಿಕ ಸಮೀಕ್ಷೆಯ ವಿಮರ್ಶೆಯ ಅವಶ್ಯಕತೆಯು ಕಾಣಿಸಿಕೊಂಡಿತು. ಏಕೆಂದರೆ ಜೀವನಾನುಭವದ ಹಿನ್ನೆಲೆಯಲ್ಲಿ ಬಂದ ಅನುಭವದ 'ಬೆಲೆ' ಎಂದಿಗೂ ಹೆಚ್ಚಿನದು, ಶ್ರೇಷ್ಠವಾದದ್ದು ತಾನೆ ?

'ಬುದ್ಧಿಯು' ಅವತರಿಸಿರುವ ಸಾಂಸ್ಕೃತಿಕ ಹಿನ್ನೆಲೆಯು, ಭಾರತೀಯ ಹಾಗೂ ಗ್ರೀಕ ಪುರಾತನ ಪರಂಪರೆಗಳಲ್ಲಿ ಸಮಾನ ಸ್ವರೂಪದ್ದೇ ಇರುವ ಸೋಜಿಗವು, ನನ್ನ ಕುತೂಹಲವನ್ನು ಕೆರಳಿಸಿತು. ಮಾನವನ ಇತಿಹಾಸದಲ್ಲಿ 'ಬುದ್ಧಿ'ಯು ಅವತರಿಸಿರುವ **ಸಮಯ :** ಆಚಾರಾಂಗವು ಭಾರತ ಹಾಗೂ ಗ್ರೀಕ ಪುರಾತನ ಸಂಸ್ಕೃತಿಗಳಲ್ಲಿ ಸಮಾನವೇ ಇರುವ ಕಾರಣವು ಯಾವುದು ? ಎಂಬ ಪ್ರಶ್ನೆ ಎದುರು ನಿಲ್ಲುತ್ತದೆ.

II

ಮಾನವ ಧರ್ಮ: ಸಂಸ್ಕೃತಿಯೊಳಗಿನ ಈ ಬಗೆಯ ಸಾಮ್ಯವನ್ನು ಕಂಡು, ಇದರ ಕಾರಣವನ್ನು ಹೇಳುವ ವಾಡಿಕೆಯಲ್ಲಿ ಬದಲಾವಣೆ ಆಗುತ್ತ ಬಂದಿವೆ: ೧) ಆರ್ಯ–ದ್ರಾವಿಡ ಇಂತಹ ಜನಾಂಗಗಳ ಪ್ರಭಾವವು ಈ ಬಗೆಯ ಸಾಮ್ಯಕ್ಕೆ ಕಾರಣ, ಎಂಬ ಗ್ರಹಿಕೆಯು ಈಗ ಶಿಥಿಲವಾಗತೊಡಗಿದೆ. ವಿಭಿನ್ನ ಜನಾಂಗ ಗಳ (Races) ಪರಿಣಾಮವು ಪರಸ್ಪರರ ಮೇಲೆ ಆಗಿಲ್ಲ, ಎಂದು ಬಗೆ ಯುವ ಕಾರಣವಿಲ್ಲ. ಆದರೆ, ಇಂತಹ ಬಾಹ್ಯ ಕಾರಣಕ್ಕಿಂತಲೂ ಆಳವಾದ ಕಾರಣವು, ಧರ್ಮ: ಸಂಸ್ಕೃತಿಯನ್ನು ರೂಪಿಸುವಲ್ಲಿ ಉಂಟು, ಎಂಬುದು ಈಗ ದೃಢಪಟ್ಟಿದೆ.

೨) 'ಜನಾಂಗಗಳ ಪ್ರಭಾವ'ದ ಕಾರಣವು ಅಲ್ಲದೆ, 'ಭೌಗೋಲಿಕ ಪರಿಸ್ಥಿತಿಯು, ಆ ಜನರ ಸಂಸ್ಕೃತಿಯನ್ನು ರೂಪಿಸಲು ಕಾರಣವಾಗಿದೆ', ಎಂಬ ಈ ದೃಷ್ಟಿಕೋನವು, "ಸ್ಥಳ–ಕಾಲದ ಭೌತ ಪರಿಸರಸವು ಧರ್ಮ: ಸಂಸ್ಕೃತಿಗೆ ಕಾರಣ" ಎಂಬ ವಿಚಿತ್ರ ನಿಷ್ಕರ್ಷಕ್ಕೆ ಒತ್ತಾಯಪಡಿಸುತ್ತದೆ.

೩) ಉಪಯುಕ್ತತಾವಾದವು ಧರ್ಮ: ಸಂಸ್ಕೃತಿಯನ್ನು ರೂಪಿಸಿದೆ, ಎಂಬ ದೃಷ್ಟಿಕೋನದ ಮಾನವ ಶಾಸ್ತ್ರಜ್ಞರ ಸಂಪ್ರದಾಯವೂ ಒಂದು ಇತ್ತು. ಫ್ರಾನ್ಸಿನ ಡುರ್‌ಖಾಯಿಂ ಈತನು, ತೀರ ಪ್ರಾಥಮಿಕ ಜನಗಣದಲ್ಲಿ ಹೋಗಿ, ಅವರಿಗೆ ಧರ್ಮವು ಅವಶ್ಯವೆನಿಸಿದ್ದೇಕೆ? ಎಂಬ ಭೂಮಿಕೆಯಿಂದ ಆ ಪಂಗಡದ ಅಧ್ಯಯನ ಮಾಡುತ್ತಾನೆ.

ಸಾವಿನ ಭೀತಿಯಿಂದ ಮುಕ್ತರಾಗಲು, ಧರ್ಮ–ದೇವತೆಗಳನ್ನು ಕಲ್ಪಿಸಿ ಕೊಂಡಿದ್ದಾಗಿದೆ. ಮೃತ್ಯುದೇವತಾ–ಸ್ವರೂಪದ ಮೇಲಿಂದ ಆ ಪಂಗಡದ ಸಾಂಸ್ಕೃತಿಕ ಮಟ್ಟವು ವ್ಯಕ್ತವಾಗುತ್ತದೆ.

ಈ ಬಗೆಯ ಅನ್ವೇಷಣೆಯಲ್ಲಿ 'ಅಭಾವವೇ ಸ್ಥಾಯಿ' ಇರುವ (Nagatve) ಸಂಪ್ರದಾಯಗಳೇ ಅರಿಕೆಗೆ ಬಂದುದುಂಟು. ಈ ಉಪ ಯುಕ್ತತಾವಾದವು 'Functional Religion' ಗಳನ್ನು ಕಂಡು ಹಿಡಿದ ದ್ದಾಯ್ತು.

೪) ಆದರೆ, ಧರ್ಮ: ಸಂಸ್ಕೃತಿಯ ಮೂಲ ಪ್ರಚೋದನೆಯು ಮಾನವರ ಅಂತರಂಗದಲ್ಲಿ ಉಂಟು. ಆದಕಾರಣ ಈ ನಿಟ್ಟಿನಿಂದ,

ಈ ಧರ್ಮ: ಸಂಸ್ಕೃತಿಗಳ ಸಂಶೋಧನವು ಆಗುವ ಅವಶ್ಯಕತೆಯನ್ನು ಕಂಡ ಮಾನವಶಾಸ್ತ್ರಜ್ಞರು ತೀರ ಅಪರೂಪವಾಗಿದ್ದಾರೆ.

ಭಾರತೀಯ ಹಾಗೂ ಗ್ರೀಕ ಪುರಾತನ ಸಂಸ್ಕೃತಿಗಳ ತುಲನೆಯಲ್ಲಿ, **ಇವೆರಡೂ ಸಂಸ್ಕೃತಿಗಳ ಸಾಮ್ಯದ ಸಮಸ್ಯೆಯು ಅಂತರಿಕ ಪ್ರಚೋದನೆಯ ಭೂಮಿಕೆಯಿಂದ,** ಸುಲಭವಾಗಿ ಪರಿಹಾರವನ್ನು ಪಡೆಯುತ್ತದೆ.

೫) ಈ ಸಾಮ್ಯದಿಂದಾಗಿ, ಈ ಮಾನವ ಜೀವನ ವಿಶ್ವವನ್ನು ನಿಯಂತ್ರಿಸುವ ಪಾತಳಿಗಳು ಉಂಟು, ಎಂಬ ಸಂಗತಿಯು ದೃಢಪಡುತ್ತದೆ. ಡಾ. ಕ್ರೋಬರ ಹಾಗೂ ಡಾ. ಲೆವ್ಹಿ–ಸ್ಟ್ರಾಸ್ ಪ್ರಭೃತಿಗಳು ಈ ನಿಟ್ಟಿನಲ್ಲಿ ಮಾಡಿರುವ ಕಾರ್ಯವು ಮೌಲಿಕವಾಗಿದೆ.

## III

**'ಈ ಮಾನವನು ವಿಶ್ವ ನಿಯಮಕ್ಕೆ ಅಧೀನನಿದ್ದಾನೆ'** ಅಥವಾ ವಿಶ್ವ ನಿಯಮದ ಪ್ರಚೋದನೆಯು ಮಾನವರ ಕೃತಿಗೆ ಕಾರಣ ಎಂಬ ಮೌಲಿಕ ಮಾತು ಇಂದು ಮರೆತಂತಾಗಿದೆ! ವಿಕಾಸತತ್ತ್ವದ ಪ್ರಕ್ರಿಯೆಯಲ್ಲಿ, ಈ 'ನರ ಪ್ರಾಣಿಗೆ' (Creature)'ಮನು'ಜತ್ವವು ಲಭಿಸಿದೆ. 'ಈ ಪ್ರಕ್ರಿಯೆಯು ಒಂದು ವಿಶ್ವನಿಮಯಕ್ಕೆ ಅನುಸರಿಸಿ ಇದೆ,' ಎಂಬ **ಸಂಗತಿಯು ವೈವಸ್ವತ ಮನುಪ್ರಣೀತದ ಮಾನವ ಧರ್ಮದ ಆಕೃತಿ'ಯ** ಅನುಷಂಗದಿಂದ ದೃಢವಾಗಿದೆ (ಭಾಗ ೨, ಪು.೫೪–೧೨೫).

**ಮಾನವ ಪ್ರಜ್ಞೆ–ಪ್ರಜ್ಞೆಯಅಂಗವಾದ ಮನಃಶಕ್ತಿ** ಇದು, ಭಾವಾತ್ಮಕ ಅನುಭಾವಾತ್ಮಕ ವಿಧಾಯಕಸ್ವರೂಪದ ಅಭೀದ್ಧಾತ್ (Immanent) ಪಾತಳಿಯಲ್ಲಿ ಹಾಸು ಹೊಕ್ಕು ಆಗಿರುವ ಅರ್ಥ: ವಿಚಾರದ ಲಾಭ ಪಡೆದು 'ಮಾನವ ಧರ್ಮ: ಸಂಸ್ಕೃತಿಯನ್ನು' ರೂಪಿಸುವ ದಿಕ್ಕಿನಲ್ಲಿ ಕೆಲಸಮಾಡುವ ಸ್ವಭಾವವುಳ್ಳದ್ದು ಆಗಿದೆ. ಇದು ಜೀವನದ ಪಾತಳಿ. ಆದರೆ, ಈ ಮಾನವನಲ್ಲಿ ತಲೆದೋರಿರುವ **'ಬುದ್ಧಿ', ಬುದ್ಧಿಯ ಅಂಗವಾದ ಮನಃಶಕ್ತಿ ಇದಕ್ಕೆ ಈ ಸ್ಥಳ–ಕಾಲದ ಸಂದರ್ಭದ ಅಭಾವವೇ ಸ್ಥಾಯಿ ಇರುವ ಜೀವಿತದ ಅಸ್ತಿತ್ವದಲ್ಲಿ ಆಸಕ್ತಿಯ ವಿಪರೀತ**

ಭಾವಾತ್ಮಾಕ, ಅನುಭವಾತ್ಮಕ, ಅಭೀದ್ಧಾತ್ ಸ್ವರೂಪದ ಅರ್ಥ: ವಿಚಾರದ ಹಾಸುಹೊಕ್ಕು ತಳಪಾಯದಲ್ಲಿ ಇರುವ ಜೀವನದ ಅಸ್ತಿತ್ವ

ದಿಂದಾಗಿ, ಸ್ಥಳಕಾಲದ ಸಂದರ್ಭದ ಅಭಾವಾತ್ಮಕ ಜೀವಿತವು ಶಕ್ಯವಾಗುತ್ತದೆ. ಇದು ಜೀವನ ವಿಶ್ವದ ಸಾಪೇಕ್ಷ ಸಿದ್ಧಾಂತ.

ಸಂಗೀತದಲ್ಲಿ ನಿಜವಾದ ತಾಳದ ಅನುಷಂಗದಿಂಗ, 'ಹುಸಿ' ತಾಳಕ್ಕೂ ಒಂದು ಪರಿಮಿತ ಸ್ಥಾನವಿದೆ ಆದರೆ ಈ 'ಹುಸಿತಾಳಕ್ಕೆ' ಸ್ವತಂತ್ರ ಸ್ಥಾನವು ಇಲ್ಲ; ಎಂದರೆ ಹುಸಿಯಿಂದ ಸಂಗೀತ ಪ್ರಾರಂಭವಾಗುವುದಿಲ್ಲ. ಇದೇ ಮೇರೆಗೆ ಜೀವನ ಸಂಗೀತದಲ್ಲಿ ಅಭಾವಾತ್ಮಕ ಜೀವಿತಕ್ಕೂ ಸ್ಥಾನವು ಉಂಟು; ಆದರೆ ಅತ್ಯಂತ ಅಭಾವದ ಜೀವಿತಕ್ಕೆ ಜೀವನದಿಂದ ಭಿನ್ನವಾದ ಸ್ವತಂತ್ರ ಅಸ್ತಿತ್ವ, ಸ್ಥಾನ ಇಲ್ಲ.

ಪ್ರಜ್ಞೆ–ಪ್ರಜ್ಞೆಯ ಅಂಗವಾದ ಮನಸ್ಸು, ಮತ್ತು ಬುದ್ಧಿ, ಬುದ್ಧಿಯ ಅಂಗವಾದ ಮನಸ್ಸು, ಇವೆರಡರಲ್ಲಿ ಯಾವುದು 'ಆದಿಕಾರಣ' ಎಂಬುದನ್ನು ನಿರ್ದಿಷ್ಟಪಡಿಸಿ ಅರಿಯಲು ಮುಂದಿನ ಪ್ರಕರಣಗಳ ವಿವರಣೆಯು ಪ್ರಯೋಜನಕಾರಿಯಾದೀತು ಎಂಬುವ ನಿರೀಕ್ಷೆಯಿದೆ.

## ಪ್ರಕರಣ ೨

## ಬುದ್ಧಿಯು ಅವತರಿಸುವ ಮುನ್ನವೇ ಮಾನವನ ಇತಿಹಾಸವು ಪ್ರಾರಂಭವಾಗಿತ್ತು

### I

ಮನುಜನೊಡನೆ ಇತಿಹಾಸವು ಪ್ರಾರಂಭವಾಗಿದೆ. ಈ ಮಾನವನು ಇತಿಹಾಸದ ವಿಷಯವು ಆಗಿರುವಂತೆ, ಈ ತನ್ನ ಇತಿಹಾಸವನ್ನು ರೂಪಿಸಬಲ್ಲವನೂ ಈ ಮಾನವನೇ. ಮಾನವೇತರ ಪ್ರಾಣಿಗಳು ಇತಿಹಾಸದ ವಿಷಯವಾಗಿವೆ. ಅವಕ್ಕೆ ತಮ್ಮ ಇತಿಹಾಸವನ್ನು ರೂಪಿಸುವ 'ರೂಪಿಸಬೇಕು,' ಎಂಬ ಪ್ರಜ್ಞೆಯು ಇಲ್ಲ.

ಈ ಹಿನ್ನೆಲೆಯಲ್ಲಿ, ಇತಿಹಾಸವನ್ನು ರೂಪಿಸುವ ಪ್ರೇರಣೆ, ರೂಪಿಸುವ

ಶಕ್ತಿ, ಇದು ಪ್ರಜ್ಞೆಯ ಅಂಗವಾದ ಮನಸ್ಸಿಗೇ ಉಂಟು ಎಂಬ ಅಂಶವು ಹೊರವಡುತ್ತಿದೆ. ಇತಿಹಾಸದ–ಐತಿಹಾಸಿಕ ಆಗು–ಹೋಗುಗಳಿಗೆ ಆಧಾರ ಭೂತವಿರುವ 'ಸಮಯ'ವು ಮನಸ್ ತತ್ತ್ವ ಯುಕ್ತವಿರುತ್ತವೆ. ಈಅಂಶವನ್ನು ತತ್ತ್ವಜ್ಞ ಕಾಂಟನು ಎಂದೋ ಹೇಳಿದ್ದಾನೆ." Historical knowlege is possible because its objects are noumena."

ಆದರೆ, ಪ್ರಜ್ಞೆ, ಪ್ರಜ್ಞೆಯ ಅಂಗವಾದ ಮನಸ್ಸು ಮಾನವನ ಇತಿಹಾಸ ವನ್ನು ರೂಪಿಸಬಹುದಾಗಿರುವಂತೆ; ಬುದ್ಧಿ, ಈ ಬುದ್ಧಿಯ ಅಂಗವಾದ ಮನಸ್ಸು ಇದು ಮಾನವನ ಇತಿಹಾಸವನ್ನು ಪ್ರೇರಿಸಲಾರದು; ರೂಪಿಸಲಾರದು. ಏಕೆಂ ದರೆ, 'ಬುದ್ಧಿ'ಯು ವೈಯಕ್ತಿಕ ಸ್ವರೂಪದ್ದು ಆಗಿದೆ. ಮನಸ್ಸು, ಪ್ರಜ್ಞೆಯಂತೆ 'ಮನು'ಜರಿಗೆಲ್ಲ ಸಮಾನ, ಸಾಧಾರಣವಾಗಿಲ್ಲ. ಪ್ರಜ್ಞಾ, ಉಪಜ್ಞಾ ಇದು, ಬೌದ್ಧಿಕ ಲೆಕ್ಕಾಚಾರದ ಹಾಗಿನ ತರ್ಕ ಅನುಮಾನದ ಸ್ವಭಾವದ್ದಲ್ಲ. 'ಉಪ ಜ್ಞಾತಂ ಉಪದೇಶೇನ್ಯಃವಿನಾ ಜ್ಞಾತಂ.' ಆದರೆ ಬುದ್ಧಿಯು ಈಬಗೆಯ ಸಹಜ, ಒಳತಿಳಿವಿನ ಬೆಳಕಿನ ಪಾತಳಿಗಿಂತ ಭಿನ್ನವಾದ ಪಾತಳಿಯ ಮೇಲಣ ಶಕ್ತಿ ಯಾಗಿದೆ.

ಇತಿಹಾಸವು ಬೌದ್ಧಿಕ ಲೆಕ್ಕಾಚಾರದಿಂದ ಪ್ರಾರಂಭವಾಗಿಲ್ಲ. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧ-ಮೋಕ್ಷಯೋಃ' ಇಂಥ ಮನಸ್ಸು ಇದು ಮಾನವನೊಡನೆಯೇ ಹುಟ್ಟಿದೆ. ಆದರೆ ಬುದ್ಧಿಯು, ಮನಸ್ಸಿನಷ್ಟು ಪ್ರಾಚೀನ ವಲ್ಲ. 'ಬುದ್ಧಿಯು' ಇತಿಹಾಸದ ಕಕ್ಷೆಗೆ ಒಳಗಾಗಿದೆ. ಬುದ್ಧಿಯು ಬಾಳಿನಲ್ಲಿ ಕಾಣಿಸಿಕೊಂಡ ಹಿನ್ನೆಲೆಯು ಬೆಳಕಿಗೆ ಬರುತ್ತದೆ. ಆದರೆ ಪ್ರಜ್ಞೆ : ಮನಸ್ಸು 'ಮನು'ಜನಷ್ಟು ಪುರಾತನವಿದೆ !

## II

ಪ್ರಜ್ಞೆ, ಮನಸ್ಸು ಇವುಗಳಸಂಗಡವೇ ಮಾನವ ಭಾಷೆ ಕಾಣಿಸಿಕೊಂಡಿದೆ. ಇತಿಹಾಸವೂ ಮೈವೆತ್ತಿದೆ. ಭಾಷೆಯು ಬುದ್ಧಿಯಿಂದ ಪ್ರಾರಂಭವಾಗಿಲ್ಲ. ಭಾಷೆ ಮತ್ತು ಧರ್ಮ, ಸಂಸ್ಕೃತಿ ಇವುಗಳ ಬೇರು ಒಂದರೊಳಗೊಂದು ತೊಡಕಿಕೊಂಡಿವೆ.

ಭಾಷೆ, ಧರ್ಮ : ಸಂಸ್ಕೃತಿ ಇವು ಪ್ರಜ್ಞಾಯುಕ್ತ ಮನಸ್ಸಿನಿಂದ ಪ್ರಚೋ ದಿತವಿರುವುದರಿಂದ, ಇವೆಲ್ಲವುಗಳ ತಳಪಾಯದಲ್ಲಿ ಅಂತಃಸಂಗತಿಯು ಒಳ ಗೊಂಡಿರುವುದರೀಂದ ಇವು ಇತಿಹಾಸದ ವಿಷಯಗಳೂ ಆಗಿವೆ.

## III

ಆದರೆ ಅಂತರ್–ವಿಸಂಗತಿ, ಪ್ರೇರಣಾದ್ವಂದ್ವವು ಇತಿಹಾಸದ–ಮಾನ ವೇತಿಹಾಸದ ವಿಷಯವು ಆಗಲು ಶಕ್ಯವಿಲ್ಲ. ಅರ್ಥ : ವಿಚಾರಕ್ಕೆ ಇತಿಹಾಸ ವಿದೆ. ಅಂತಃಸಂಗತಿಯಿಲ್ಲದ್ದು ಅರ್ಥವಲ್ಲ; ವಿಚಾರವೂ ಅಲ್ಲ. ಅಂತರ್–ವಿಸಂಗತಿಯಿಂದಾಗಿ ಅದರೊಳಗಿನ ಅರ್ಥವು ನಷ್ಟವಾಗುತ್ತದೆ. ಉದಾ–'ಅಮೃತ ಇದರೊಳಗಿನ ಅಂತರ್–ವಿಸಂಗತಿಯಿಂದಾಗಿ, ಈ ಅಮೃತವು ಇತಿ ಹಾಸದ–ಅನುಭವದ ಕಕ್ಷೆಯ ಹೊರಗೇ ಉಳಿಯುತ್ತದೆ; ಉಳಿಯಲೇಬೇಕು. ಏಕೆಂದರೆ ಈ 'ಅ–ಮೃತ' ರಸದಲ್ಲಿ ಅದ್ಭುತ ಜಾದೂ ಶಕ್ತಿಯಿಂದ ಅಮೃತದ ತಳಹದಿಯಲ್ಲಿ **Noumenon** ಇಲ್ಲ.

'ಉದ್ಧರೇತ್ ಆತ್ಮನಾತ್ಮಾನಂ' ಎಂಬ ಉಪದೇಶ ಮಾಡುವ ಅ–ಮೃತ ಸ್ವರೂಪ ಈ 'ಭಗ'ವಂತನು. ಆ ಬಳಿಕ, 'ನನಗೇ ಶರಣು ಬಾ' ಎಂದೂ ಅಪ್ಪಣೆ ಕೊಡುತ್ತಾನೆ ! 'ನಿನ್ನ ಉದ್ಧಾರವು ನಿನ್ನ ಕೈಯಲ್ಲಿ ಇದೆ,' ಎಂಬುದು ಇತಿಹಾಸವನ್ನು ದೂಪಿಸಬಲ್ಲ ಉಪದೇಶ. 'ಆದರೆ ನನಗೇ ಶರಣು ಬಾ' ಎಂದು ಹೇಳುವ ಈ 'ಭಗ'ವಂತನೆಂದರೆ ಯಾರು ? ಈ ಭಾಷೆಯು ಇತಿಹಾಸದ ವಿಷಯವಿದ್ದುದು ನಿಜವಿದ್ದರೆ, ಈ 'ಭಗವಂತ' ಎಂಬ ಮಾತಿಗೂ ಇತಿಹಾ ಸವು ಇರಲೇಬೇಕಷ್ಟೆ ? ಹಾಗಾದರೆ, ಈ 'ಭಗ'ವಂತ' ಸಂಕೇತದ ಹಿನ್ನೆಲೆಯ ಐತಿಹ್ಯವು ಏನು ?

## IV

'ದದಾಮಿ ಬುದ್ಧಿಯೋಗಂ' ಎಂದು ಹೇಳುತ್ತಿರುವುದರಿಂದ, ಬುದ್ಧಿಯು ಮಾನವ ಇತಿಹಾಸದಲ್ಲಿ ಕಾಣಿಸಿಕೊಂಡದ್ದು ಯಾವಾಗ ಎಂಬುದು ಇಲ್ಲಿ ಅನ್ವೇಷಣೆಯ ವಿಷಯವೇ ಆಗಿರುವುದರಿಂದ, ನರ(ಳ)ನಿಗೆ, 'ನಿನಗೆ ಬುದ್ಧಿ ಯೋಗ' ಅನುಗ್ರಹಿಸುತ್ತೇನೆ,' ಎಂಬ ಈ 'ಭಗ'–ವಂತನು ಯಾರು ? ಎಂಬು ದರ ಕೂಲಂಕುಷ ವಿಚಾರವೂ ಅನಿವಾರ್ಯವಾಗುತ್ತದೆ.

'ಭಗ'ವಂತನು ಹೇಳುತ್ತಾನೆ : 'ನಿನಗೆ ಬುದ್ಧಿಯೋಗವನ್ನು ಅನುಗ್ರ ಹಿಸುತ್ತೇನೆ;ಇದರ ಬಲದಿಂದ ನೀನು ನನ್ನ ಹತ್ತಿರ ಬರಬಲ್ಲೆ.' ದದಾಮಿ ಬುದ್ಧಿ ಯೋಗತಂ ಯೇನ ಮಾಂ ಉಪಯಾಂತಿತೇ (೧೦,೧೧) ನರ(ಳ)ರಿಗೆ ದಯಪಾಲಿಸಿದ ಬುದ್ಧಿಯೋಗದಿಂದ ಅವರು ನನ್ನನ್ನು ಹೊಂದಬಲ್ಲರು.

'ಭಗ'ವಂತನ ಹತ್ತಿರಕ್ಕೆ ಒಯ್ಯಲು ಸಮರ್ಥವಿರುವ ಈ 'ಬುದ್ಧಿ'ಯು ಮೋಕ್ಷ ಮಾರ್ಗಕ್ಕೇ ತಳ್ಳಿಕೊಂಡು ಹೋಗುತ್ತಿರಲಿಕ್ಕೇಬೇಕು. ಆದಕಾರಣ ಈ ಬುದ್ಧಿಯು, ಸಾಮಾಜಿಕ ಜೀವನದಿಂದ ದೂರ ಎಲ್ಲಿಯೊ ಏಕಾಂತಕ್ಕೆ ಅಟ್ಟ ಬಲ್ಲುದೇ ಹೊರತು, ಇದು ಸಾಮಾಜಿಕ ಪ್ರಜ್ಞಾಪ್ರೇರಕವಲ್ಲದ್ದರಿಂದ, ಇತಿಹಾಸ ವನ್ನು ರೂಪಿಸಬಲ್ಲ ಬುದ್ಧಿಯು ಇದಲ್ಲ, ಎಂಬುದು ನಿಶ್ಚಿತವಿದೆ.

V

ಈ ಗೀತೆಯಲ್ಲಿ ಇನ್ನೊಂದೆಡೆಗೆ, ಬುದ್ಧಿಯು ಭಗವಂತನ ಶಕ್ತಿ ಆಗಿದೆ, ಎಂದೂ ಹೇಳಿದ್ದಾಗಿದೆ. 'ಬುದ್ಧಿಃ ಬುದ್ಧಿಮತಾಂ ಅಹಂ' = 'ಬುದ್ಧಿವಂತರ ಬುದ್ಧಿ ಎಂದರೆ ನಾನೇ' (೭।೧೦), ಇದು ನಿಜವಿದ್ದರೆ ಬುದ್ಧಿಯು, 'ಭಗ'ವಂತ ಕೃಷ್ಣಸ್ವರೂಪದ್ದೇ ಆಗುತ್ತಿದೆ! ಆದಕಾರಣ, ಬುದ್ಧಿಯ ಸ್ವರೂಪ ಗ್ರಹಣಕ್ಕೆ ಈ ಭಗವಂತನ ಸ್ವರೂಪ ಆಕೃತಿ ಗೊತ್ತಾಗಲಿಕ್ಕೆಬೇಕು.

ಆದರೆ ಈ ಭಗ–ವಂತ=ಕೃಷ್ಣ ಎಂದರೆ ಯಾರು? ಎಂಬ ಪ್ರಶ್ನೆ ಎದುರು ನಿಲ್ಲುತ್ತದೆ. ಪರಮ ಭಕ್ತರು ಒಳ್ಳೆ ಅಕ್ಕರೆಯಿಂದ ಹಾಡಿ ಹೊಗಳು ತ್ತಾರಲ್ಲ: ಕಪಟ ನಾಟಕ–ಸೂತ್ರಧಾರಿ', ಮುರಾರಿ ಕೈಪರೆಗಾಡಿದಂ! ಎಂದರೆ ತಾಳ–ಲಯವನ್ನು ಮೆಚ್ಚಿರುವ ದೇವನೀತ; 'ನಾದಲೋಲ' ಎಂದೂ ಹೇಳುವದಿಲ್ಲವೆ?

'ಬುದ್ಧಿಃ ಬುದ್ಧಿಮತಾಂ ಅಹಂ' ಎಂಬ ಈ ಭಗವಂತನು 'ನಾದ ಲೋಲನೂ' ಉಂಟೆ? ಬುದ್ಧಿಗೂ ಸಂಗೀತ–ನಾದಕ್ಕೂ ಅಂತಃಸಂಬಂಧವಿ ದೆಯೇ? ಕೊಳಲು ನುಡಿಸುವ ಈ ಭಗವಂತನು ನಾದಲೋಲನು; ಬುದ್ಧಿವಂತ ರಲ್ಲಿ ಬುದ್ಧಿವಂತನು' ಎಂಬ ಸ್ತೋತ್ರದ ಈ ಭಗವಂತನು 'ಕಪಟ ನಾಟಕದ ಸೂತ್ರಧಾರಿ'—ಈ ನಾಟಕದಲ್ಲಿ ತೆರೆಯ ಮರೆಗೆ ನಿಂತು ಎಲ್ಲರನ್ನು ತನ್ನ ಶ್ರುತಿಗೆ 'ನಾದ' ಕುಣಿಯ ಹುಚ್ಚುತ್ತಾನೆ. ಹಾಗಾದರೆ ಈ 'ನಾದ' ಎಂತ ಹದು? ಮತ್ತು ಇಂಥ ಈ 'ಭಗ'–ವಂತನು ಕೃಷ್ಣನು=ಯಾರು ? ಎಲ್ಲಿ ಇದ್ದಾನೆ?

'ಬುದ್ಧಿಯು–ಇತಿಹಾಸದಲ್ಲಿ' ಎಂದರೆ ಇದು ಈ ಬಾಳಿನಲ್ಲಿ ಅವತರಿ ಸಿದ್ದು ಯಾವಾಗ?' ಎಂಬುದೇ ಈ ಅನ್ವೇಷಣೆಯಲ್ಲಿ ಮುಖ್ಯ ಪ್ರಶ್ನೆ ತಾನೆ? ಆದಕಾರಣ ಈ 'ಕಪಟನಾಟಕ ಸೂತ್ರಧಾರಿ' ಎಂಬ 'ಭಗ'ವಂತನು ಇರುವ

ಎಡೆ' ಇವನ ಆಕೃತಿ ಸ್ವರೂಪ ಇದು ಕಣ್ಣಳತೆಯಲ್ಲಿ ಬಂದದ್ದಾದರೆ, 'ಬುದ್ಧಿ ಮತಾಂ ಬುದ್ಧಿಃ' ಆಗಿರುವ ಈ 'ಭಗ'ವಂತನ ಅಕ್ಕಪಕ್ಕದಲ್ಲಿಯೇ 'ಬುದ್ಧಿ' ಎಂಬ ಈ ವಸ್ತುವೂ ಇರಲೇಬೇಕಷ್ಟೇ ?

VI

ಈ 'ಭಗ'ವಂತ ಕೃಷ್ಣ ಇರುವ ಎಡೆ ಯಾವುದು ? 'ದೇವಾದಿ ದೇವ' ಎಂದೂ ಹೊಗಳಲಾಗುವ ಈ 'ಕೃಷ್ಣ'ನನ್ನು 'ಭಗ'ವಂತ ಎಂಬ ವಿಶೇಷಣ ದಿಂದ ಸೂಚಿಸಲಾಗುತ್ತದೆ. ಆದ ಕಾರಣ, ಈ ಕೃಷ್ಣನು ಇರುವ ಎಡೆಯ ನಿರ್ದೇಶನವೇ ಈ "ಭಗ ಎಂಬಲ್ಲಿ ಇರಲಾರದೆ? ಈ 'ಭಗ'ವಂತನನ್ನು ಕುರಿತು ಇರುವ ಈ ಗ್ರಂಥಕ್ಕೆ 'ಭಗವತ್‌ಗೀತೆ" ಎಂದು ಹೆಸರು! ಆದುದರಿಂದ ಈ ಗೀತೆ ಯಲ್ಲಿ ಈ 'ಭಗ'ವಂತನು ಅಡಗಿರುವ ಶಕ್ಯತೆಯನ್ನು ಅಲ್ಲಗಳೆಯಲು ಆಗು ವುದಿಲ್ಲ.

ಈ 'ಭಗ' ವಂತನನ್ನು ನಮ್ಮ 'ತಂದೆ' ಲೋಕದ 'ತಂದೆ' ಎನ್ನುವುದ ಲ್ಲದೆ, ಈತನು ಸೃಷ್ಟಿಕರ್ತನೂ ಆಗಿದ್ದಾನೆ, ಎಂಬ ನಂಬುಗೆಯೂ ಉಂಟು. ಇದು ನಿಜವಿದ್ದರೆ, 'ಸೃಷ್ಟಿ ಪ್ರಸವದ ವರ್ಣನೆ,' ಈ ಗೀತೆಯಲ್ಲಿಯೇ ಒಂದೆಡೆಗಾದರೂ ಇರಲೇಬೇಕು. ಈ 'ಸೃಷ್ಟಿ' ಪ್ರಸವವನ್ನು ವಿವರಿಸಿರುವ ಈ ಎಡೆಯಲ್ಲಿ, 'ಭಗ'ವಂತನು ಅಡಗಿರಲೇ ಬೇಕಲ್ಲವೆ ?

ನಮ್ಮ ಸುದೈವ : ಈ ಗ್ರಂಥದಲ್ಲಿ, 'ಭಗ'ವಂತನೇ ಖುದ್ದಾಗಿ ಹೇಳುತ್ತಿದ್ದಾನೆ–

"ಮಯಾ ಅಧ್ಯಕ್ಷೇಣ (ಅಧಿ ಅಕ್ಷೇಣ), ಪ್ರಕೃತಿಃ
ಸೂಯತೇ ಸಚರಾಚರಮ್"

ನನ್ನ ಅಧ್ಯಕ್ಷತೆಯಿಂದಾಗಿ ಈ ಪ್ರಕೃತಿ ಮಾತೆ–ಭೂದೇವಿ 'ಚರಾಚರ' ಎಂದರೆ ಸ್ಥಾವರ–ಜಂಗಮ ಸೃಷ್ಟಿಯನ್ನು ಹಡೆಯುತ್ತಾಳೆ.

ಈ ರೂಪಕದಲ್ಲಿ, ಈ 'ಭಗ'ವಂತ ಎಂಬವನು ತಾನು 'ಅಧ್ಯಕ್ಷ'ನಿರುವು ದಾಗಿ ಹೇಳಿದ್ದಾನೆ! ' ಅಧ್ಯಕ್ಷ'ತನ ಎಂದರೆ ಮೇಲ್ವಿಚಾರಣೆ, ಮೇಲ್ನೋಟ,– ಎಲ್ಲವೂ ಸರಿಯಾಗಿ ಸುಸೂತ್ರವಾಗಿ ಸಾಗಿದೆ ತಾನೆ ? ಎಂಬ ಕಾಳಜೀವಹಿಸು ವುದು....ಸರಿ. ಆದರೆ ಈ ಬಗೆಯಲ್ಲಿ 'ಕಾಳಜೀವಹಿಸುವ' ಯಜಮಾನಿಕೆಯಿಂದ ಸೃಷ್ಟಿ–ಪ್ರಸವ ಆಗೋದು ಉಂಟೆ ?

## VII

ಜ್ಞಾತ ಮಾನದಂಡದಿಂದ ಅಜ್ಞಾತ–ಹೊಸತನ್ನು ಗ್ರಹಿಸಿಕೊಳ್ಳುವ ಪದ್ಧತಿಯು ಉಂಟಷ್ಟೆ? ಇದೇ ಬಗೆಯಲ್ಲಿ ಯಜಮಾನ, ಯಜಮಾನಿ ಇವರಲ್ಲಿ ಇರುವ ಸಂಬಂಧವೇ ಅಧ್ಯಕ್ಷ=ಭಗವಂತ ಮತ್ತು ಪ್ರಕೃತಿ=ಭೂಮಾತೆ ಇವರಲ್ಲಿಯೂ ಇರಲೇಬೇಕು. ಭೂಮಿ=ಪ್ರಕೃತಿಯನ್ನು 'ಸ್ತ್ರೀ' ರೂಪದಲ್ಲಿ ಕಲ್ಪಿಸಲಾಗುತ್ತದೆ. ಆದಕಾರಣ, ಈ ಶ್ಲೋಕದೊಳಗಿನ 'ಅಧ್ಯಕ್ಷ' 'ಭಗ' ವಂತನು ಗಣ್‌–ಡು=ಪುರುಷನೇ ಇರಲಿಕ್ಕೆಬೇಕಾಯ್ತು! ಕಪಟನಾಟಕ ಸೂತ್ರಧಾರಿ ಅಲ್ಲವೇ ಈತನು! ಮಾಡಿ ಮಾಡಿಸುವ ಚಪಲ ಇವನಿಗೆ ಇರಬೇಕು, ಎಂದು ಕಾಣುತ್ತದೆ. ಈ ಕಪಟೆಯು 'ಅಧ್ಯಕ್ಷ' ಈ ಹೆಸರಿನಲ್ಲಿ ಅಡಗಿದ್ದಾನೆ. ಅಧಿ–ಅಕ್ಷ: ಗಣ್‌ಡು: ಗಣ್ಣು. ಹಾಗಾದರೆ ಈ ಅಧಿ (ಮೇಲಣ) 'ಅಕ್ಷ' ಇರುವ ಎಡೆಯೇ ಪ್ರಕೃತಿ=ಭಗ ಆಗುತ್ತಲಿದೆ! ಈ 'ಭಗ'ವೇ ಇಲ್ಲದೆ, ಇವನಿಗೆ ಭಗವಂತನೆಂಬ ಹೆಸರು ಸಲ್ಲದು.

ಆದರೆ ಇಲ್ಲಿ ಅತ್ಯಂತ ಪ್ರಾಮಾಣಿಕ ಸ್ವರೂಪದ ಒಂದು ಪ್ರಶ್ನೆ: ಈ 'ಭಗ', ಮತ್ತು 'ಭಗವಂತ' ಇವರ ಬಗೆಗೆ ವ್ಯಕ್ತಿ ಸಾಪೇಕ್ಷ ಪಾತಳಿಯ ಮೇಲಣ ಅನುಭವವು ಬರುತ್ತದೆ; ಈ ವ್ಯಕ್ತಿ ಸಾಪೇಕ್ಷ ಅನುಭವವು ವ್ಯಕ್ತಿ ನಿರಪೇಕ್ಷ ಪಾತಳಿಯ ಮೇಲೆಯೂ ಬರಲು ಶಕ್ಯವೇ? ಈ 'ಭಗ' ಎಂಬುದೇ "ಬಯಲೇ ಬಯಲು" 'ಟೊಳ್ಳು'! ಫಕ್ತ ಹೀಗೆ (೦) ಇರುವಾಗ, ಈ 'ಭಗಸ್ಥ' 'ಭಗವಂತ' ಎಂಬುವನು, ಆತ್ಯಂತಿಕ ಅಭಾವ ರೂಪನು ಆಗುತ್ತಿಲ್ಲವೇ? ಈ ಕಾರಣಕ್ಕಾಗಿಯೆ ಇದನ್ನು ಚಿತ್ತದ ವಿಲಾಸ, ಚಿದ್ವಿಲಾಸ, ಎಂದು ಹೇಳಲಾಗುತ್ತಿದೆ. ನೀವು ಏನು ಕಲ್ಪಿಸುವಿರೊ, ಅದು ಅಲ್ಲಿ ಕಾಣುತ್ತದೆ. ಆದರೆ, 'ನಂಬಿ ಕೆಟ್ಟವರಿಲ್ಲ' ಎಂಬುದು ನಿಜವಿದ್ದರೂ, ಈ ಬಯಲನ್ನೇ 'ಉಂಟು' ಎಂದು ನಂಬುವಲ್ಲಿ ಮೋಸವು ಆಗುತ್ತಿಲ್ಲವೆ?

## VI

ಈ ಸಂದರ್ಭದಲ್ಲಿ 'ಬಯಲನ್ನು ಉಂಟು' ಎಂದು ನಂಬುವ ಮೋಸವೊಂದೇ ಮೋಸ–ಅಲ್ಲ; ಈ ಭಗವಂತನೆಂಬ='ಬಯಲಲ್ಲಿ ಅಡಗಿರುವನೆಂಬ ಈತನು(ಲಿಂಗ), ಇದು, ಮಾತಾಡುತ್ತದೆ. ಈ ಲಿಂಗ ಮೂಕಾಂಬಾ

ಕುಮಾರ ಭಗವತ್ ಗೀತೆಯ ಉಪದೇಶವಮಾಡಿದ್ದಾನೆ, ಎಂದೂ ನಂಬ ಬೇಕಾಗುತ್ತಿಲ್ಲವೆ? ಈ ಆತ್ಮವಂಚನೆಗೆ ಕೊನೆಯುಂಟೆ?

ಭಾರತದ ಸಾಂಸ್ಕೃತಿಕ ಇತಿಹಾಸವನ್ನು ಸಮೀಕ್ಷಿಸಿದರೆ, ನಂಬಿ 'ಕೆಟ್ಟ ವರಿಲ್ಲ' ಎಂಬ ಮಾತು ವಿಶ್ವಾಸಾರ್ಹವಲ್ಲ, ಎಂದು ಕಂಡುಬರುತ್ತದೆ! 'ಭಗ' ವತ್ ಗೀತೆ ಭಾರತೀಯರ ರಾಷ್ಟ್ರೀಯ ಮಟ್ಟದ 'ಪವಿತ್ರ' ಎಂಬ ಗ್ರಂಥತಾನೆ? ಇದರ ನಿತ್ಯ ಪಾರಾಯಣೆಯು ನಡೆಯುತ್ತಿರುವ ಈ ಭಾರತದ ದೈನ್ಯಾವಸ್ಥೆಯು, ನೂರಾರು ವರ್ಷಗಳಿಂದಲೂ ತಪ್ಪಿಲ್ಲವಲ್ಲ! ಈ ಗೀತೆಯ ಪಠಣದಿಂದ ಶ್ರೀ ವಿಜಯಃಭೂತಿ (ಸಂಪತ್ತು, ಗೆಲುವು ಮತ್ತು ಏಳ್ಗೆ) ಇದು ಲಭಿಸುವುದು ನಿಶ್ಚಿತ ಎಂದು ಈ ಗ್ರಂಥದಲ್ಲಿಯೇ ಹೇಳಿದೆ! ಈ ಆಶ್ವಾಸನವನ್ನು ನಿಜವೆನ್ನ ಲಾದೀತೆ?

IX

ಆದರೆ, ಹೀಗೆಲ್ಲವೂ ಕಾಣುವುದು, 'ಇದು ಬುದ್ಧಿಗೇಡಿಗಳ ಲಕ್ಷಣ'! ಈ ಕಾರಣದಿಂದಲೆ, ಈ ಬುದ್ಧಿ (Reason, Intellect) ಮೇಧಾಶಕ್ತಿ, ಎಂಬುದು ಅವಶ್ಯವಿದೆ; ಹುಟ್ಟು, ಸಾವು ಯಾರಿಗೆ ತಪ್ಪಿದೆ? ದೇಶಕ್ಕೂ ಉನ್ನತಿ, ಅವನತಿ ಇರೋದೇ. ಇಂದು ಅವನತಿಯಲ್ಲಿ ಸಿಲುಕಿದ್ದರೂ ಭಗವತ್ ಕೃಪೆ ಯಿಂದ, ನಾಳೆ ಮಹೋನ್ನತ ಸ್ಥಿತಿ ಬರಲಿಕ್ಕೇ ಇಲ್ಲ, ಎಂದು ಯಾರು ಹೇಳು ತ್ತಾರೆ? ತಿಳುವಳಿಕೆ ಇರುವ 'ಬುದ್ಧಿವಂತರು' ಹೀಗೆ ನಿರಾಶರಾಗೋದಿಲ್ಲ. 'ನಂಬಿಕೆಟ್ಟವರಿಲ್ಲ,' ಯೋಯತ್ ಶ್ರದ್ಧಃ|ಸ ಏವ ಸಃ॥ ಈ ಪ್ರಪಂಚದಲ್ಲಿ 'ದೈವ' ಎಂಬೋದು ಒಂದು ಉಂಟಷ್ಟೆ? 'ಭಗವಂತನಲ್ಲಿ ಅಶ್ರದ್ಧೆಯು ಬುದ್ಧಿ ಹೀನರ ಲಕ್ಷಣ'!

ಮೇಲಣ ಈ ದುರ್ಬುದ್ಧಿಗೆ ಕಾರಣವೇನು ಗೊತ್ತೆ? 'ಇತಿಹಾಸ'. ಆದ ಕಾರಣ ಪ್ರಪಂಚದೊಳಗಿನ ನರ(ಳ) ಸಂಪ್ರದಾಯದ ದಿವ್ಯಾಧ್ಯಾತ್ಮಗಳೆಲ್ಲವೂ, ಈ 'ಇತಿಹಾಸ'ವನ್ನು ಬೆಲೆಗೆ ಎರವಾಗುವಂತೆ ಮಾಡುವುದಕ್ಕೆ ತಪ್ಪಿಲ್ಲ. ಬುದ್ಧಿಗೆ, ಇತಿಹಾಸದಲ್ಲಿ ನಂಬುಗೆಯಿಲ್ಲ. ಹಿಂದೆ, 'ಹೀಗೆ ಹೀಗೆಲ್ಲ ಆಯ್ತು' ಎಂದರೂ ಈ ಬುದ್ಧಿವಂತರಾದವರು ಆ ನಿನ್ನೆಗಳನ್ನೇ ನಂಬಿ ಬಾಳೋದಿಲ್ಲ. ನಾಳೆಗಳಲ್ಲಿ ತೀರ ನೂತನ ಸ್ವರ್ಗ ಸದೃಶ ಬಾಳು, ಭೌತ ಶಾಸ್ತ್ರಗಳ ಬಲದಿಂದ

ಶಕ್ಯವಾಗಲಿಕ್ಕೇ ಇಲ್ಲ, ಎಂದು ಬಗೆಯುವಲ್ಲಿ, ಈ ಬುದ್ಧಿಯ ಅಪಾರಶಕ್ತಿಯಲ್ಲಿ ಅವಿಶ್ವಾಸವನ್ನು ವ್ಯಕ್ತಪಡಿಸಿದಂತಾಗುತ್ತಿದೆ!

ಇದೆಲ್ಲ ಹಾಗಿರಲಿ, 'ಬುದ್ಧಿ' ಮತ್ತು 'ಭಗವಂತ' ಇವರಲ್ಲಿ ಸಾಹಚರ್ಯ, ಅನ್ಯೋನ್ಯ ಇರುವುದಂತೂ ಸುಳ್ಳಲ್ಲ.

X

ಆದುದರಿಂದ ಮಾನವನ ಇತಿಹಾಸದಲ್ಲಿ ಬುದ್ಧಿಯು ಕಾಣಿಸಿಕೊಂಡಿರುವ 'ಸಮಯ' ಪರಿಸರದ ಈ ಅನ್ವೇಷಣೆಯು, ಅನ್ವೇಷಕರನ್ನು ಲಿಂಗಾಂಗ ಯೋಗದ ಹತ್ತಿರಕ್ಕೆ ಒಯ್ಯುತ್ತಿದೆ!

ಯೋನಿ–ಲಿಂಗದ ಸಾಹಚರ್ಯದ ಈ ಬುದ್ಧಿಯು, ವ್ಯಕ್ತಿ ವೈಶಿಷ್ಟ್ಯದ 'ಸ್ವ' ಅರ್ಥದ ದಾರಿಯಲ್ಲಿಯೇ ತಳ್ಳಿಕೊಂಡು ಹೋಗುವದರೊಡನೆ ಈ ಬುದ್ಧಿ, ವ್ಯಕ್ತಿನಿರಪೇಕ್ಷ ಸಮಾಜ–ಸಮಷ್ಟಿಯನ್ನು ಕಡೆಗಣಿಸದೆ ಇರಲಾರದು, ಗೀತೆಯಲ್ಲಿ ಇದಕ್ಕೆ ಪುಷ್ಟಿದಾಯಕ ಪ್ರಮಾಣವಿದೆ: 'ಭಗ'ವಂತನಾದವನಿಗೆ 'ಕರ್ತವ್ಯ' ಎಂಬುದೇನೂ ಉಳಿದಿರುವುದಿಲ್ಲ। "ನಮೇ ಅಸ್ತಿ ಕರ್ತವ್ಯಂ ತ್ರಿಷುಲೋಕೇಷು ಕಿಂಚನ."

ಈ ಮಾನವ ಧರ್ಮ-ಸಂಸ್ಕೃತಿ, ಇದನ್ನು ಪ್ರಚೋದಿಸಿರುವ, ಪ್ರಚೋದಿಸಬಲ್ಲ ಆದಿಕಾರಣ ಶಕ್ತಿಯು ಯಾವುದು? ಪ್ರಜ್ಞೆಯೊ? ಬುದ್ಧಿಯೋ?

ಇಂದಿನದು Age of Reason = ಬುದ್ಧಿಯ ಯುಗ, ಬುದ್ಧಿವಂತರ ಯುಗ, ಎಂಬುದನ್ನು ಒಪ್ಪದೆ ಇರುವವರು ವಿರಳ. "Real is rational; Rational is real." ವಾಸ್ತವ ಸತ್ಯವನ್ನು ಅರಿಯಲು 'ಬುದ್ಧಿ' (Reason) ಇದಕ್ಕಿಂತ ಸಮರ್ಥವಾದ ಬೇರೆ ಸಾಧನವು ಇಲ್ಲ, ಎಂದು ಬಗೆಯಲಾಗಿದೆ. ಆದಕಾರಣ, ಬುದ್ಧಿ ಶಕ್ತಿಯ ಇತಿಮಿತಿಗಳನ್ನು ಕಂಡುಕೊಳ್ಳುವುದು ಲೇಸು.

# ಪ್ರಕರಣ ೩

# ಬುದ್ಧಿ ಶಕ್ತಿಯ ಇತಿಮಿತಿಗಳು

I

'Reason is God' 'ಬುದ್ಧಿಯೇ ದೇವರು' ಎಂಬ ನಂಬುಗೆಯ ಸ್ಟೋಯಿಕ್ ಪಂಥವು ಗ್ರೀಸಿನಲ್ಲಿ ಇತ್ತು. ಇಷ್ಟು ದೂರ ಹೋಗುವ ಕಾರಣ ವಿಲ್ಲ; ನಮ್ಮ 'ಏಕದಂತ ಗಣಪತಿ' ಇವನು ಸಾಕ್ಷಾತ್ ಬುದ್ಧಿಯ ಪ್ರತೀಕವೇ ಆಗಿದ್ದಾನೆ. ಆದರೆ ಗ್ರೀಕ-ಸಂಸ್ಕೃತಿಯಲ್ಲಿ, ಇರುವಂತೆ Reason, Intelligence ಇವಕ್ಕೆ ಇರುವಷ್ಟು ಸುಸ್ಪಷ್ಟ ಅಗ್ರಪಟ್ಟ, ಭಾರತೀಯ ಪೂರ್ವ ಪರಂಪರೆಯಲ್ಲಿ 'ಬುದ್ಧಿಗೆ' ಅಷ್ಟು ಎದ್ದು ಕಾಣುವಂತೆ ಇಲ್ಲ. Real is rational and rational is Real!

ಭಾರತೀಯ ನರ(ಳ) ಸಂಪ್ರದಾಯಗಳೂ ಮೋಕ್ಷಾಕಾಂಕ್ಷಿಗಳೇ. ಒರ್‌ಫಿಕ್ ಪಂಥೀಯ ಪೈಥ್ಯಾಗೋರಾಸನ ಸಂಪ್ರದಾಯವೂ, ಭವ ಬಂಧನ ದಿಂದ ಮುಕ್ತವಾಗುವ ಗುರಿಯುಳ್ಳದ್ದೇ ಇದ್ದರೂ, ಈ ಸಂಪ್ರದಾಯದಲ್ಲಿ, ಭೂಮಿತಿ, ಗಣಿತ, ಸಂಖ್ಯಾ ವಿಚಾರಕ್ಕೆ ಎಂದರೆ 'ಬುದ್ಧಿಗೆ ಕಲ್ಪಿಸಿ ಕೊಟ್ಟಿರುವ ಸ್ಥಾನವು ಅನನ್ಯ ಸಾಧಾರಣವಿದೆ. ಆಧ್ಯಾತ್ಮ ಜ್ಞಾನಕ್ಕೆ ಗಣಿತ-ಭೂಮಿತಿಯು ಒಂದು ಸಾಧನ, ಎಂಬ ನಂಬುಗೆಯು, ಪಾಶ್ಚಾತ್ಯ ಸಂಸ್ಕೃತಿಯಲ್ಲಿ, ಪೈಥ್ಯಾಗೋರಾಸನ (ಕ್ರಿ.ಪೂ. ೫೭೨-೪೯೭) ಕಾಲದಿಂದಲೇ ಬೇರೂರಿ ಹೆಮ್ಮರವಾಗಿ ಬೆಳೆದು ನಿಂತಿದೆ.

II

ಇತಿ(ಇಂತು) ಹ (ನಿಜವಾಗಿಯೂ) ಆಸ (ಉಂಟು, ಇತ್ತು) ಎಂಬುದು ಇತಿಹಾಸದಿಂದಲೇ ಗೊತ್ತಾಗಬಲ್ಲುದು. ಆದಕಾರಣ, ಇತಿಹಾಸದ ತತ್ತ್ವ ಜ್ಞಾನ ಮತ್ತು ತತ್ತ್ವಜ್ಞಾನದ ಇತಿಹಾಸ, ಇವೆರಡರ ತಾಳಮೇಳದಲ್ಲಿಯೇ ಈ ಮಾನವ ಜೀವನಗ ಅರ್ಥ, ಇತಿಮಿತಿ ಗೊತ್ತಾಗಬಲ್ಲುದು.

ಆದರೆ, ಸೋಜಿಗದ ಸಂಗತಿಯೆಂದರೆ, 'ನಾನು ಯಾರು' ಈ 'ಜೀವನ ಎಂದರೇನು'....ಇಂತಹ ಸಮಸ್ಯೆಗಳ ಪರಿಹಾರವೇ ಗುರಿ ಆಗಿರುವ ನರ(ಳ) ಸಂಪ್ರದಾಯದ ದಿವ್ಯಾಧ್ಯಾತ್ಮಗಳು ತತ್ತ್ವಜ್ಞಾನವನ್ನು ಮೆಚ್ಚಿಕೊಂಡಿದ್ದರೂ, ಇತಿಹಾಸವನ್ನು ತಿರಸ್ಕರಿಸುತ್ತ ಬಂದಿವೆ. ಪೈಥ್ಯಾಗೋರಾಸ ಪಂಥವು ಇತಿಹಾಸ ವನ್ನು ವೃತ್ತ(೦) ಆಕೃತಿಯದ್ದಾಗಿಸಿತು. History repeats itself ಎಂಬ ಈ ಸೂತ್ರವು, ಗ್ರೀಕ–ಸಂಸ್ಕೃತಿಯಲ್ಲಿ ಪೈಥ್ಯಾಗೋರಾಸ ಸಂಪ್ರದಾಯದವರಿಂದ ಪ್ರಚಾರಕ್ಕೆ ಬಂದಿದೆ. ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ, 'ಇತಿಹಾಸ' ವನ್ನು ಇತಿಹಾಸದ ಮನೋಭಾವವನ್ನು ನಷ್ಟಪಡಿಸುವ ಅತ್ಯಂತ ವ್ಯವಸ್ಥಿತ ಯೋಜನಾಪೂರ್ವಕವಾಗಿ ಆಗಿರುವ ಅತ್ಯಂತ ಹೀನಕೃತ್ಯವು; ಈ ದಿವ್ಯಾ ಧ್ಯಾತ್ಮದ ನಿಜ ಸ್ವರೂಪವನ್ನು ಮನಗಾಣಿಸಿ ಕೊಡುತ್ತಿದೆ, (ವೈವಸ್ವತ, ಭಾಗ ೩, ಪು. ೧೨೬–೧೭೫).

III

ಗಣಿತ, ಭೂಮಿತಿಗೆ, ಇತಿಹಾಸದ ನೆಲೆ ನಿಲುಕಲಾರದು. ಆದರೆ ಇತಿಹಾಸಕ್ಕೆ, ಗಣಿತ–ಭೂಮಿತಿಯ ಜಾತಕವೂ ಗೊತ್ತು! ಏಕೆಂದರೆ ಇತಿ ಹಾಸವು ಪ್ರಾರಂಭವಾದ ಬಳಿಕಿನ, ವಿಶಿಷ್ಟ ಸಮಯ–ಪರಿಸರವು, ಗಣಿತ, ಭೂಮಿತಿ, ಸಂಖ್ಯಾವಿಚಾರವು ಅಂಕುರಿಸಿ ಬೆಳೆಯಲು ಅನುಕೂಲವನ್ನು ಕಲ್ಪಿಸಿಕೊಟ್ಟಿತು.

ಭೂಮಿತಿ, ಗಣಿತ, ಸಂಖ್ಯಾವಿಚಾರ ಇವು ಸ್ಥಳ–ಕಾಲ–ಪರಿಸರದ ಸಂದರ್ಭದ ಜೀವಿತದ ಲೆಕ್ಕಾಚಾರಕ್ಕೆ ಅತ್ಯವಶ್ಯವಾಗಿವೆ. ಫ್ರಾನ್ಸಿನ ತತ್ತ್ವಜ್ಞ ಡೆ(ಸ್)ಕಾರ್ಟೆ(ಸ್) ಈತನಿಗೆ (ಕ್ರಿ.ಶ. ೧೫೯೬–೧೬೫೦), ಗಣಿತ ಭೂಮಿತಿ ಯಲ್ಲಿ ಅತೀವ ವಿಶ್ವಾಸ; ತಾಳ–ಮೇಳ ದೊರೆತು ಗಣಿತಶಾಸ್ತ್ರದ ಮೂಲಕ ಅರಿಕೆಗೆ ಬರುವ ಜ್ಞಾನವೇ ಜ್ಞಾನ, ಇದು ಮಾತ್ರ ವಿಶ್ವಾಸಾರ್ಹ. ಇನ್ನುಳಿದ ಶಾಸ್ತ್ರಗಳ ಮೂಲಕ ನಿಶ್ಚಿತಾರ್ಥವು ಗೊತ್ತಾಗುವುದಿಲ್ಲ ಆದಕಾರಣ ಇತಿಹಾಸಕ್ಕೆ ಗಣಿತಶಾಸ್ತ್ರದ ಬೆಲೆ ಬರಲಾರದು.

ಆದರೆ, ಗಣಿತಶಾಸ್ತ್ರದ ತತ್ತ್ವಜ್ಞಾನವನ್ನು ಬರೆದ ಬರ್ಟರಾಂಡ ರಸೆಲ್ಲ ಹೇಳುವ ವಿಚಾರವು ನೆನಪಿಡುವಂತಹದ್ದು ಆಗಿದೆ. As Beitrand Russel[1]

says, pure mathematics completely assertions of type; if a premise concerning a certain object is true there must exist another premise about which that object is also true.

Mathematics, Russell says, can be defined as Science in which we never know whether we are speaking truth or not,

(Einstin, By B. Kuzenetsoy. Progressive Publishers Mascow, 1965, P. lo 5-6).

ಆದುದರಿಂದ, ಬುದ್ಧಿಯ ಮೂಲಕ ಎಂದರೆ ಗಣಿತ, ಭೂಮಿತಿ, ಸಂಖ್ಯಾ ವಿಚಾರದ ಭೂಮಿಕೆಯಿಂದ, ಈ ಮಾನವ ಜೀವನ, ಜೀವಿತ ಈ ಯಾವ ಕ್ಷೇತ್ರದ ನೆಲೆಯೂ ಗೊತ್ತಾಗಲು ಶಕ್ಯವಿಲ್ಲ, ಎಂದಂತಾಯಿತು.

IV

ಬುದ್ಧಿಯ ನೆರವಿನಿಂದ ಮಾನವ ಭಾಷೆಯ ನೆಲೆ ನಿಲುಕಲಾರದು, ಏಕೆಂದರೆ ಬುದ್ಧಿಯ ಮೂಲಕ ಭಾಷೆಯು ವೈವೆತ್ತಿಲ್ಲ. ಭಾಷೆಯು ಅಸ್ತಿತ್ವ ದಲ್ಲಿ ಬಂದ ಬಳಿಕ, ಎಷ್ಟೋ ಶತಕಗಳ ತರುವಾಯ 'ಬುದ್ಧಿ'ಯು ತಲೆಯೆತ್ತಿದೆ.

ಋಗ್ವೇದದ ಭಾಷಾಂತರಕಾರರೂ, ತುಂಬ ಮೇಧಾವಿಗಳೂ ಎಂದು ವಿಖ್ಯಾತರಾಗಿದ್ದ ಮ್ಯಾಕ್ಸಮುಲ್ಲರರಿಗೆ, 'ರೂಪಕ' ಭಾಷೆಯಲ್ಲಿ ತಲೆಯೆತ್ತಿದ ಕಾರಣವು ಗೊತ್ತಾಗಲೊಲ್ಲದು. 'ರೂಪಕ' ತಿಳಿಗೇಡಿಗಳ ಮಾತು, ಎಂದು ಎನಿಸುವಂತಿದೆ. ಉದಾ : ಮುಖ–ಕಮಲ, ಇಲ್ಲಿ ಅಂತಃಸಂಗತಿಯೇ ಇಲ್ಲ. ಆದಕಾರಣ ಬುದ್ಧಿ ಕೆಟ್ಟು ಇಂಥ ರೂಪಕಗಳು ರೂಢಿಗೆ ಬಂದಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ, ಆ ವಿದ್ವಾಂಸರು. ಆಧುನಿಕ ತೀವ್ರ ತೀಕ್ಷ್ಣ ಬುದ್ಧಿ ಯವರೆಂದು ಖ್ಯಾತಿಯಿದ್ದ ಬರ್ಟನಾಂಡರಸೆಲ್ಲ, ಒಂದು ಸಂಕೇತಕ್ಕೆ 'ಒಂದೇ ಅರ್ಥವು ಇರುವ ಶಾಸ್ತ್ರಶುದ್ಧ' ಭಾಷೆಯನ್ನು ಹಾರಯಿಸಿದರು. ಒಂದೊಂದು ಪದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳು ರೂಢಿಗೆ ಬಂದಿರುವುದರಿಂದಾಗಿ ಭಾಷೆ ಕೆಟ್ಟಿದೆ ! ನಿಃಸಂದಿಗ್ಧ ಅಭಿಪ್ರಾಯ ವ್ಯಕ್ತಪಡಿಸುವುದು ಅಶಕ್ಯವಾಗಿದೆ. ಅಂಕೆ, ಸಂಖ್ಯೆಯಲ್ಲಿ ಈ ಸಂಧಿಗ್ಧತೆಯು ಇಲ್ಲ. ಗಣಿತ ಶಾಸ್ತ್ರದಂತೆ ನಿಶ್ಚಿತ ಅರ್ಥ

ಸೂಚಕ=ಪದಗಳು ಇರಬೇಕು ಎಂಬ ರಸೆಲ್ಲರಿಗೆ, ಈ ಮಾನವ ಭಾಷೆಯ ಗೂಢವು ಅರಿಕೆಗೆ ಬರಲೇ ಇಲ್ಲ.

V

ಭಾಷೆಯೊಳಗಿನ ಪದಗಳಿಗೆ ಇತಿಹಾಸವಿದೆ; ಇದರಿಂದಾಗಿ, ಯಾವುದೊಂದು ಪದದ ಅರ್ಥವು ಬದಲಾಗುವುದರ ಹಿಂದಿನ ಇತಿಹಾಸವು ಅರಿಕೆಗೆ ಬರುತ್ತದೆ. ಜೀವನ ಜೀವಿತದ ಪ್ರತಿಬಿಂಬವು ಭಾಷೆಯಲ್ಲಿ ಒಡಮೂಡಿನಿಂತಿದೆ. ತನ್ನ ನೇರಕ್ಕೇ ನೋಡುವ ಬುದ್ಧಿಗೆ, ಭಾಷೆಯ ಕಟ್ಟಡದ ತೊಡಕು ಗೊತ್ತಾಗುವುದಿಲ್ಲ. ಭಾಷೆಯು ಮೈವೆತ್ತಿರುವಲ್ಲಿ, ಪ್ರಾಧಾನ್ಯದಿಂದ, ಪ್ರಜ್ಞೆಯ ಅಂಗವಾದ ಮನಸ್ಸಿನ ಕೈವಾಡವಿದೆ. ಈ ಮಾನವ ಭಾಷೆಯಲ್ಲಿ ಬುದ್ಧಿಯು ತಲೆಯೆತ್ತಿದ ತರುವಾಯ ಆಕಾರ ಪಡೆದ ಬುದ್ಧಿಯ ಕೈವಾಡಕ್ಕೇ ಪ್ರಾಧಾನ್ಯವಿರುವ ಪದಗಳ ಆಕಾರ, ಆಶಯವು, ಪ್ರಜ್ಞೆ=ಉಪಜ್ಞೆಯ ಮೂಲಕ ಮೈವೆತ್ತ ಪದಗಳ ಆಕಾರ, ಆಶಯಕ್ಕಿಂತ ತೀರ ಬೇರೆ ಬಗೆಯದ್ದಾಗಿರುವುದನ್ನು ಕಾಣಬಹುದು.

ಉದಾ: 'ಜಾತವೇದ ಅಗ್ನಿ' ಈ ಪದದ ಆಧಾರ ಭೂತ 'ಸಮಯ'–ಪರಿಸರವು ಯಾವುದು ಎಂಬುದನ್ನು ಊಹಿಸಿ ಅರಿಯಲು ಶಕ್ಯವಿದೆ. ಮನುಜನ ಪ್ರಾದುರ್ಭಾವದ ಸುಮಾರಿನ 'ಸಮಯ'ದ ಸೂಚನೆಯು ಇಲ್ಲಿ ಇದೆ; 'ಜಾತವೇದ' ಇದಕ್ಕೆ ಆ ಬಳಿಕ 'ಪ್ರಜ್ಞೆ' ಎಂಬ ಇನ್ನೊಂದು ಹೆಸರು ಬಂದದ್ದು ಸಾಯಣರ ಭಾಷ್ಯದಿಂದ ಗೊತ್ತಾಗುತ್ತದೆ. ಆದಕಾರಣ 'ಜಾತವೇದ ಅಗ್ನಿ' ಇದು ಪ್ರಜ್ಞೋದಯದ ಸುಮಾರಿನ ಸಮಯವನ್ನು ಗಮನಕ್ಕೆ ತಂದು ಕೊಡುತ್ತದೆ. ಆದುದರಿಂದ ಇಲ್ಲಿ ಪ್ರಜ್ಞೆಯ ಕೈವಾಡವಿರಲಿಕ್ಕೆ ಬೇಕು, ಎಂದು ಸಿದ್ಧಪಡಿಸುವ ಅವಶ್ಯಕತೆಯೇ ಇಲ್ಲ.

ಆದರೆ, ಇದಕ್ಕೆ ಪ್ರತಿಯಾಗಿ, ನ–ಚಿಕೇತ ಅಗ್ನಿ, ಸಮೀಕ್ಷಿಸಿರಿ. ಕೋಶಗಳಲ್ಲಿ, ಭಾಷೆಯಲ್ಲಿ 'ಜಾತವೇದ ಅಗ್ನಿ', 'ನ–ಚಿಕೇತ ಅಗ್ನಿ' ಇವೆರಡೂ ಒಂದರೊಂದರ ಹತ್ತರ ಇರಬಹುದಾದರೂ, ಈ ಇವೆರಡರ ಜನನ ಸಮಯದ ನಡುವೆ ಒಂದು ಯುಗದ ಅಂತರವು ಇರುವ ಶಕ್ಯತೆಯುಂಟು.

ಅಂತರ್–ವಿಸಂಗತಿಯಲ್ಲಿಯೂ, ಅಂತಃಸಂಗತಿಯನ್ನು ಕಲ್ಪಿಸಬಲ್ಲ, ಸೂಕ್ಷ್ಮ ಬುದ್ಧಿಯ ಕೈವಾಡವು ಈ ನ–ಚಿಕೇತಾಗ್ನಿಯಲ್ಲಿ ಉಂಟು.

ಈ ಹಿನ್ನೆಲೆಯಲ್ಲಿ ಸ್ಪಷ್ಟತೆಯನ್ನು ಪಡೆಯುತ್ತಿರುವ ಅಂಶಗಳು: (೧) ಬುದ್ಧಿಗಿಂತಲೂ ಪ್ರಜ್ಞೆಯು ಮೊದಲು ಕಾಣಿಸಿಕೊಂಡಿದೆ. ಮತ್ತು (೨) ಬುದ್ಧಿಯು ಅಭಾವವೇ ಸ್ಥಾಯಿ ಇರುವ ಅಂತರ್‌ವಿಸಂಗತ ಭೂಮಿಕೆಯ ಸ್ಥಲ–ಕಾಲ ಸಂದರ್ಭದ ಜೀವಿತದ ಹಂತದಲ್ಲಿ ಮೈವೆತ್ತಿದೆ.

## VI

ಭಾಷೆ, ಮತ್ತು ಧರ್ಮ–ಸಂಸ್ಕೃತಿ ಇವೆರಡರಲ್ಲಿ ಯಾವುದು ಮೊದಲು, ಎಂಬುದನ್ನು ಹೇಳುವುದು ಅಶಕ್ಯ. ಭಾಷೆಯೇ ಇಲ್ಲದೆ ಧರ್ಮ–ಸಂಸ್ಕೃತಿ ಮೈದೋರಲಾರವು; ಇದಕ್ಕೆ ಪ್ರತಿಯಾಗಿ ಧಾರ್ಮಿಕ–ಸಾಂಸ್ಕೃತಿಕ ಪಾರ್ಶ್ವ ಭೂಮಿಯ ಪ್ರೇರಣೆಯೇ ಇಲ್ಲದೆ, ಭಾಷೆಗಾಗಿ ಭಾಷೆ ಎಂಬುದು ಒಂದು ವಿನೋದವಾಗಲಿದೆ.

ಇಂದಿನ ಹೊಸ ಬಗೆಯ ಬಾಳಿನಲ್ಲಿ, ಕೊರತೆ, ಅಸಮಾಧಾನ ತಲೆದೋರಿ, ಬೌದ್ಧಿಕ ಭೂಮಿಕೆಯಿಂದ ಧರ್ಮ–ಸಂಸ್ಕೃತಿಯ ಅವಶ್ಯಕತೆಯೆನಿಸುವವರೇ ಹೆಚ್ಚು! ಅಮೇರಿಕೆಯಲ್ಲಿ ಬ್ರುಕಲಿನ್ ಮೆಡಿಕಲ್ ಕಾಲೇಜಿನ ಪ್ರೊಫೆಸರ ದಂಪತಿಗಳು ಕೇಳಿದ ಪ್ರಶ್ನೆ ನೆನಪಿಗೆ ಬರುತ್ತದೆ; 'ಧರ್ಮ' ಎಂಬುದರ ಅವಶ್ಯಕತೆ ಏನು? ಇಂದಿನ ಜೀವನ ರೀತಿಯಲ್ಲಿ, ಮದುವೆ, ಕುಟುಂಬ ಸಂಸ್ಥೆ ಇವು ಕಾಲಬಾಹಿರ ನಡೆವಳಿಗಳು ಆಗುತ್ತ ನಡೆದಿಲ್ಲವೆ?

ಇಂದಿನದು ಹೊಟ್ಲನ ಸಂಸ್ಕೃತಿ; ಇಂದು ಇಂಗ್ಲಂಡಿನಲ್ಲಿ, ನಾಳೆ ದಕ್ಷಿಣ ಆಫ್ರಿಕೆಯಲ್ಲಿ, ನಾಡದು ಚೀನ–ಜಪಾನ—ಎಲ್ಲಿ ನಮ್ಮ (ತಜ್ಞರ) ಅವಶ್ಯಕತೆ, ಉಪಯೋಗವು ಉಂಟೊ–ಅಲ್ಲಿ ಹೋಗಿ ತಂಗುವುದು. ಮದುವೆ', ಜಾತಿಧರ್ಮ ಇವು ಮಾನವ ವಿಕಾಸಕ್ಕೆ ಆತಂಕಕಾರಿಯಲ್ಲವೊ?

ಇದು ಶುದ್ಧ ಬೌದ್ಧಿಕ ದೃಷ್ಟಿಕೋನ. ಇದಕ್ಕೆ ಸಮಾಜ— ಸಮಷ್ಟಿ ಎಂಬ ಮಾತಿನ ಅರ್ಥವಾಗುವುದು ಕಷ್ಟ. ಬೌದ್ಧಿಕ ಸಹಾನುಭೂತಿಯು 'ಮಾನವತೆ'ಯ ಬಗೆಗೆ ನಿರರ್ಗಳ ಉಪನ್ಯಾಸವನ್ನೀಯಬಲ್ಲುದು.

ಈ ಬುದ್ಧಿವಾದೀ ಬುಧರ–ಬುದ್ಧರು–ಸೋಫಿಸ್ಟ ಇವರೇ ಮೊದಲಿನಿಂದಲೂ ಇದ್ದಿದ್ದರೆ 'ಭಾಷೆ' ಮೈವೆತ್ತುವ ಶಕ್ಯತೆಯೇ ಇದ್ದಿಲ್ಲ! ಅರ್ಥ—ವಿಚಾರ, ಭಾಷೆ ಇದು ಮೂಲತಃ ಸಾಮಾಜಿಕ 'ಮಂದಿ' ಸಮುದಾಯ, ತುರಮಂದಿ 'ಪ್ರಾಣಿ ವರ್ಗ!

ಆದಕಾರಣ, ಭಾಷೆ, ಧರ್ಮ, ಸಂಸ್ಕೃತಿಯು ವೊತ್ತವೊದಲಲ್ಲಿ ಆಕಾರ ಪಡೆಯತೊಡಗಿದ **ಬಳಿಕ ಗಾನ** ಯುಗವು 'ಬುದ್ಧಿಯ' ಅವತಾರವಾಗುವುದಕ್ಕೂ ಮುಂಚಿನದು.

ಈ ವೊದಲು ಅರಿಕೆಗೆ ಬಂದಿರುವಂತೆ 'Reason is God'=ಬುದ್ಧಿಃ-ಬುದ್ಧಿಮತಾಂ ಅಹಂ' ಎಂಬ 'ಭಗ'–ವಂತನ ದೇವರ ಈ ಬುಧರ–ಬುದ್ಧರ ಯುಗದಲ್ಲಿ, "'ನಾಮ' ಬೇರೆ ಬೇರೆ ಇರಬಹುದು" ಆದರೆ ಸೃಷ್ಟಿಕರ್ತನ ಎಂಬ ದೇವರು ಒಬ್ಬನೇ. ನಾಮ (Essence) ಒಂದೇ.

ಈ ವರೆಗಿನ ವಿವರಣೆಯಿಂದ, 'ಆದಿಕಾರಣ' ಎಂಬ ಏನಲ್ಲವನ್ನೂ ಮೂಡಿ ಮಾಡಿಸುವ, ಈ ಬುದ್ಧಿಯುಗದ ದೇವರು; 'ಭಗವಂತನು' ಇರುವಂತೆ, ಬುದ್ಧಿ ಯುಗಕ್ಕಿಂತಲೂ' ಮುಂಚಿನ–ಯಾವ ಯುಗದಲ್ಲಿ, ಈ ಭಾಷೆ, ಧರ್ಮ, ಸಂಸ್ಕೃತಿ ವೈವೆತ್ತಿ ಆಕಾರ ಪಡೆದು ತೊಡಗಿದುವೊ–ಆ ಯುಗಕ್ಕೂ ಒಬ್ಬ 'ಮೂಡಿಮಾಡಿಸುವ' ದೇವರು ಇರಲೇಬೇಕಷ್ಟೆ ?

ಈ ಬುದ್ಧಿಯ, ಬುಧರ–ಬುದ್ಧರ ಯುಗಕ್ಕೂ ಮುಂಚಿನ ಅss ಪ್ರಜ್ಞೆಯ ಅಂಗವಾದ ಮನಸ್ಸಿನ 'ಮನು'–ಜರ ಯುಗದ ಆದಿದೇವರು ಯಾರು? ಆದರೆ ಇಲ್ಲಿ ಇನ್ನೊಂದು ಸಮಸ್ಯೆ : ಇವರು ಇಬ್ಬರು ದೇವರು ಆಗುತ್ತಾರೆ! ಈ ಇಬ್ಬರಲ್ಲಿ ನಿಜವಾದ ದೇವರು ಯಾರು ? ಎಂಬ ಪ್ರಶ್ನೆ ಏಳುತ್ತದೆ.

ಈ ದೇವತಾ ವಿಚಾರವನ್ನು ಒಂದಕ್ಕಿಂತ ಹೆಚ್ಚು ನಿಟ್ಟಿನಿಂದ ಸಮೀಕ್ಷಿಸಿ ತಾಳಮೇಳದೊಡನೆ ನಿರ್ದಿಷ್ಟಪಡಿಸಿ ಅರಿಯಲು ಶಕ್ಯವೆ ?

'Reason' (ಬುದ್ಧಿವಾದೀ) ಭೂಮಿಕೆಯ ಪ್ಲೇಟೋ ಹಾಗೂ Nous Mind (ಪ್ರಜ್ಞಾವಾದೀ) ಅರಿಸ್ಟೋಟ್ಲ್, ಈ ಗುರು–ಶಿಷ್ಯರು ನಂಬಿದ್ದ ದೇವತಾ ವಿಚಾರದ ಮೂಲಕವಾಗಿ, ಈ ಸಂಗತಿಯನ್ನು ನಿರ್ದಿಷ್ಟಪಡಿಸಿ ಅರಿಯಲು ಶಕ್ಯವಾಗಬಹುದಾಗಿದೆ.

# ಪ್ರಕರಣ ೪

# ನಿಜವಾದ ದೇವರು ಯಾರು ?

## ಅಥವಾ

## ಧರ್ಮ-ಸಂಸ್ಕೃತಿ ಪ್ರಚೋದಕ ಆದಿಕಾರಣ ಶಕ್ತಿ ಯಾವುದು ?

## (ಬುದ್ಧಿಯೋ ? ಪ್ರಜ್ಞೆಯೋ)

### I

ಈ ಸ್ಪಷ್ಟೀಕರಣವು ತತ್ತ್ವಜ್ಞಾನದ ಆಳಕ್ಕೆ ಒಯ್ಯಲಿದೆ! ಅಲ್ಲದೆ, ಇತಿಹಾಸದ ಆಧಾರವಿಲ್ಲದ 'ಕೇವಲ' ತಾತ್ತ್ವಿಕ ವಿವೇಚನೆಯು ತರ್ಕ, ಅನುಮಾನದ, 'ನಿಜ' ಎಂದು ಎನಿಸಬಹುದಾದ ಕಲ್ಪನಾ ರಾಜ್ಯದಲ್ಲಿ ಸೆಳೆದೊಯ್ಯಬಹುದು. ಆದರೂ ಡಾ. ಐನ್ಸಟನ್ ಹೇಳುವಂತೆ I) 'Free creation or contruct' ಇದು ಒಟ್ಟಿನ ಮಾನವೀಯ ಜೀವನಾನುಭವಕ್ಕೆ ವಿಸಂಗತವಿರಬಾರದು. ಐನ್ಸಟನ್ ಹೇಳುವ ಸತ್ಯಾನ್ವೇಷಣೆಯ ಇನ್ನೊಂದು ಒರೆಗಲ್ಲು ಇದು II) "In any case, it turns out that among the augurs usually is agreement in judging the inner-perfection of the theories and even more so concerning the degree of external confirmation (Einstein, p. III)

### II

'ನಿಜವಾದ ದೇವರು ಯಾರು' ಇದನ್ನು ನಿರ್ದಿಷ್ಟಪಡಿಸಿ ಅರಿಯುವಾಗ, ಐತಿಹಾಸಿಕ ಸ್ವರೂಪದ, ಹಾಗೂ ವಿಚಾರವಂತರ ಪ್ರಾಮಾಣಿಕ ಜೀವನಾನುಭವಗಳ ಬೆಳಕು ಲಭಿಸಿದಲ್ಲಿ ಇದನ್ನು ಸಂದೇಹಿಸಲು ಅವಕಾಶವೇ ಉಳಿಯಲಾರದು. ಆದರೆ ಈ ವ್ಯಕ್ತಿಗಳು ಭಾರತೀಯ ಪಡೆಯಚ್ಚಿನ ವ್ಯಾಸ, ಯಜ್ಞವಲ್ಕ್ಯ ಪ್ರಭೃತಿಗಳಂತಹ ಮಿಥ್ಯಾ (mythical) ಮಹಾಪುರುಷರಿರಕೂಡದು.

### ಪ್ಲೇಟೋನ 'ದೇವರು'

ಮಾನವ ಜೀವನ ವಿಶ್ವದ ಆಕೃತಿಯ ಬಗೆಗೆ, (ಕ್ರಿ. ಪೂ. ೪೨೭-೩೪೭) ಪ್ಲೇಟೋ ಹಾಗೂ ಅರಿಸ್ಟೋಟ್ಲ (ಕ್ರಿ.ಪೂ. ೩೮೪-೩೨೨)ಇವರಿಬ್ಬರಲ್ಲಿ ಭಿನ್ನಾ

ಭಿಪ್ರಾಯವು ಇತ್ತು. ಇದರ ವಿವರಣೆಯು ವೈವಸ್ವತ ಸಂಪ್ರದಾಯದ ಸ್ಪಷ್ಟೀಕರಣದಲ್ಲಿ ಬಂದಿದೆ. (ಪೂ. ೧೯೯-೧೧೫) ಪ್ಲೇಟೋನು ಮೊದಲಲ್ಲಿ ಸೊಕ್ರೆಟೀಸನ (ಕ್ರಿ. ಪೂ. ೪೭೭-೩೯೯) ಶಿಷ್ಯನಾಗಿದ್ದನು. ಸೊಕ್ರೆಟಿಸನು ಸೂರ್ಯೋಪಾಸಕನಿದ್ದನೆಂಬ ಪ್ರತೀತಿ ಇದೆ. ಆದರೆ ವೃದ್ಧಾಪ್ಯವು ಸಮೀಪಿಸಿದಂತೆ, ಈತನು ಪೈಥ್ಯಾಗೋರಾಸ (ಕ್ರಿ. ಪೂ. ೬೦೦) ಪಂಥೀಯ ಒಬ್ಬ ಮಹಾನ್" ವ್ಯಕ್ತಿಯ ಪ್ರಭಾವಕ್ಕೆ ಒಳಗಾದನು, ಎಂದು ಈಗ ಸಪ್ರಮಾಣವಾಗಿ ಸಿದ್ಧವಾಗಿದೆ.

ಆದರೂ ಪ್ಲೇಟೋನ ದೇವತಾ ವಿಚಾರವು ಅಸ್ಪಷ್ಟವಿದೆ. Good is God ಎಂಬ ಅವನ ವಿಚಾರದ ನೆಲೆ ನಿಲುಕುವುದಿಲ್ಲ. ಈತನಲ್ಲಿ 'Reason =ಬುದ್ಧಿಗೇ ಅಗ್ರಸ್ಥಾನವಿತ್ತು. "Reason belongs to man, the person, and cannot be separated from him. It does not come into his mind "from out of doors" as Hardie tran slate's Aristotles, phrases". (A History of philosophical Systems p. 105)

ಇಲ್ಲಿ 'Reason', ಭಾರತೀಯ ಪರಂಪರೆಯ ಬುದ್ಧಿ—ಮೇಧಾಶಕ್ತಿ ಇದೇ ಅಭಿಪ್ರೇತವಿರಲಿಕ್ಕೆಬೇಕು. ಪೈಥ್ಯಾಗೋರಾಸ ಪಂಥದ ಪ್ರಭಾವಕ್ಕೆ ಒಳಗಾಗಿದ್ದುದನ್ನು ಸ್ಮರಿಸಿಕೊಂಡರೂ ಸಾಕು. ಪ್ಲೇಟೋನು, 'ಭಗ'ವಂತ ಸಂಪ್ರದಾಯದವನೇ ಇರಬೇಕೆಂಬ ಸಂಗತಿಯು ದೃಢಪಡುತ್ತದೆ.

ಪೈಥಾಗೋರಾಸ ಪಂಥದಲ್ಲಿ 'ದಶ' (10) ಈ ಸಂಖ್ಯೆಗೆ ಇರುವ ಪ್ರಾಶಸ್ತ್ಯವನ್ನು ಸ್ಮರಿಸಿಕೊಳ್ಳಬೇಕು. ಭಾರತೀಯ ದಿವ್ಯಾಧ್ಯಾತ್ಮದಲ್ಲಿಯೂ 'ದಶ' (10) ಇದಕ್ಕೆ ಅನನ್ಯ ಸಾಧಾರಣ ಮಹತ್ವವಿದೆ. ಈ ವಿಶ್ವಪುರುಷನ ಆಕೃತಿ ಇದು. Plato distinguished ten substances which represented ten grades of beings : (1) absolute (2) many: Pythagorean Unlitmited ಹೀಗೆ ಹತ್ತರ ವಿವರಣೆಯೂ ಇದೆ. (Zeller, P-105)

ಪ್ಲೇಟೋನ ಪ್ರಭಾವವನ್ನು ವಿವರಿಸುವಾಗ, "His philosophy became a strong pillar of Christion dogmas. " ಕ್ರಿಸ್ತಪಂಥದ ಅದ್ವಿತೀಯ ಸಂತ ಆಗಸ್ಟಾಯಿನ್ (Augustine) ಈತನು ಪ್ಲೇಟೋನಿಂದ ತುಂಬ ಪ್ರಭಾವಿತನಾಗಿದ್ದಾನೆ. (Zeller P. 150.)

III

ಪ್ಲೇಟೋನು ದಿವ್ಯಜ್ಞಾನಿ (mystic) ಆಗಿದ್ದನು. ರಸೆಲ್ಲ, ಹೇಳಿರುವಂತೆ, ಪ್ಲೇಟೋನು 'Geometer is God', ಎಂದಿದ್ದಾನೆ. ಇನ್ನು ಈ ಎಲ್ಲ ಬಾಹ್ಯ ( outside ) ಪ್ರಮಾಣಗಳ ಸಾಮ್ಯದ ಪ್ರಮಾಣವನ್ನು (degrees) ಪ್ರಮಾಣಿಸಿ ನೋಡಬಹುದಾಗಿದೆ. ಐನ್ಸಟಿನ್ನರು ಕಂಡುಕೊಂಡ 'ಸತ್ಯದ' ಒರೆಗಲ್ಲಿನ ಪ್ರಯೋಜನ ಪಡೆದು, ಪ್ಲೇಟೋನ ದೇವರ ಆಕೃತಿ ಸ್ವರೂಪವನ್ನು ಗ್ರಹಿಸಿಕೊಳ್ಳಲು ಶಕ್ಯವೆ, ಎಂದು ನೋಡುವ ಅವಶ್ಯಕತೆಯು ಇದೆ.

ಈ ಬಾಹ್ಯ ಸಾಮ್ಯದಲ್ಲಿ ಹೆಚ್ಚಿನ ಪ್ರಮಾಣದ ತಾಳಮೇಳವು (agreement) ಉಂಟು, ಎಂದು ಕಂಡುಬಂದರೆ, ಬಳಿಕ ಆಂತರಿಕ ಅಂತಃಸಂಗತಿಯಲ್ಲಿ ಪರಿಪೂರ್ಣತೆಯು (inner—perfection) ಕಂಡುಬರುವದೇ ಎಂಬುದನ್ನು ವಿಮರ್ಶಿಸಬಹುದಾಗಿದೆ.

ಬಾಹ್ಯ ಸಾಮ್ಯಗಳು ಇವು : I) ಪ್ಲೇಟೊ, ಪೈಥಾಗೋರಾಸಪಂಥವನ್ನು ಮೆಚ್ಚಿಕೊಂಡಿದ್ದಾನೆ. ಇವನ ಲೇಖನಗಳಲ್ಲಿ ಆ ಸಂಪ್ರದಾಯದ ಪ್ರಭಾವವು ಕಂಡು ಬರುತ್ತದೆ; ಎಂದು ಬಲ್ಲಿದವರೆಲ್ಲರೂ ಒಪ್ಪಿದ್ದಾರೆ.

II) ಇನ್ನೊಂದು ಬಾಹ್ಯ ಪ್ರಮಾಣವು, 'ಅಸ್ಸಲ' ಕ್ರೈಸ್ತ ತತ್ತ್ವ ಪ್ರತಿಪಾದಕ ಅಗಸ್ಟೈನ್. ಈತನು ತಾನು ಆಂತರಿಕ ದೃಷ್ಟಿ (In-sight) ಪಡೆದದ್ದು ಪ್ಲೇಟೋನ ಗ್ರಂಥದ ಪಾರಾಯಣದಿಂದ ಎಂದಿದ್ದಾನೆ.

III) ಮೂರನೆಯ ಬಾಹ್ಯ ಪ್ರಮಾಣ; ಗುರು ಸಾಕ್ರೆಟಿಸ್‌ನ ವೈಚಾರಿಕ ಭೂವಿಕೆಯನ್ನು ಕಡೆಗಣಿಸಿದ್ದು; ಕೇಂದ್ರಸತ್ತೆಯ ಭೂಮಿಕೆ ಸ್ವೀಕರಿಸಿ, ಪ್ರಜಾಪ್ರಭುತ್ವಕ್ಕೆ ಅನ್ಯಾಯ ಬಗೆದನು, ಎಂಬ ಆಕ್ಷೇಪಕ್ಕೆ ಗುರಿಯಾದದ್ದು. ಝೆಲ್ಲರ ಹೇಳಿರುವ ಮಾರ್ಮಿಕ ವಾಕ್ಯವು ಹೀಗಿದೆ: ರಾಜಕೀಯ ಹಕ್ಕುಗಳನ್ನು ಗಣಿತ ಪದ್ಧತಿಯಿಂದ ಎಲ್ಲರಿಗೂ ಸಮನಾಗಿ ಹಂಚುವುದು ಪ್ಲೇಟೋನಿಗೆ ಮಾನ್ಯವಿದ್ದಿಲ್ಲ. "It is not an arithmetical but a geometrica equality.." (P.141) "The whole. State takes the form of a religious community ....a church...." ರೋಮನ್ ಕ್ಯಾಥೋಲಿಕ್ ಸಾಮ್ರಾಜ್ಯವಾದಕ್ಕೆ ನಾಂದಿ ಇಲ್ಲಿದೆ, 'ಪೋಪ' ಸರ್ವಾಧಿಕಾರಿ.

IV) ಐಹಿಕ ಜೀವನವು, ಆ ಏಕಂ; Idea ಇದರ ಛಾಯೆ, ಭವ ಬಂಧನದಿಂದ ಮುಕ್ತವಾಗುವುದೇ ಬಾಳ ಗುರಿ ಆಗುತ್ತದೆ !

V) ಕುಮಾರ, ಕುಮಾರೀ ಸಂಪ್ರದಾಯದ ಪ್ರಚೋದನೆ ಪ್ರಚ್ಛನ್ನವಾಗಿ ಇಲ್ಲಿ ಇದೆ; ಸುಪ್ರಜಾ ನಿರ್ಮಾಣದ ಉದಾತ್ತ ? ಉದ್ದೇಶ ಇಲ್ಲಿ ಇದೆ. ಮನೆಮಾರಿನ ಚಿಂತೆ, ಬಂಧನವು ಇಲ್ಲದ ಕೆಲವು 'ತ್ಯಾಗಿ'ಗಳು, ನಿಯೋಗದಿಂದ ಸಂತತಿ ನಿರ್ಮಿಸುವ ಯೋಜನೆ ಹೇಳಿದ್ದಾನೆ. ವ್ಯಾಸನ ನಿಯೋಗ ತಂತ್ರದ ಸಾಮ್ಯವಿದೆ. ಚರಲಿಂಗ ಅಥವಾ ಜಂಗಮಲಿಂಗದ ಶಾರೀರಿಕ ಅವಶ್ಯಕತೆಗಳನ್ನು ಪೂರಯಿಸುವುದು. ಸಮಾಜದ ಕರ್ತವ್ಯವಾಗುತ್ತದೆ.

ಈ ಉಪದೇಶದ ಭಯಾನಕ ಸ್ವರೂಪವು 'ಚಿಂತ್ಯವಿದೆ, 'ದಾಂಪತ್ಯ ಧರ್ಮ'ದಲ್ಲಿ ಸಾಮಾಜಿಕ ಕರ್ತವ್ಯದ ಗೃಹಸ್ಥಾಶ್ರಮವನ್ನು, 'ಮಾನವ ಧರ್ಮ' ದಲ್ಲಿ ಉಳಿಸಿಕೊಂಡು ಬರುವ ಜರೂರಿ ಇದೆ. ಆದರೆ ಪ್ಲೇಟೋನಿಗೆ ಆದರ್ಶ ಗೃಹಸ್ಥಾಶ್ರಮದ=ಕುಟುಂಬ ಸಂಸ್ಥೆಯ ನೆನಪು ಆಗದಿದ್ದದ್ದು ಸೋಜಿಗ ! ಅತ್ಯಂತ ಪ್ರಭಾವಿ ಬುದ್ಧಿ ಶಾಲಿ, ತನ್ನ ಗ್ರಂಥಗಳ ಉದ್ದಕ್ಕೂ ಇವನು ಓದುಗರನ್ನು ಮರಳುಗೊಳಿಸುವ ಭಾಗಗಳು ದೊರೆಯಲಾರವು. 'ಭಗ'ವತ್ ಗೀತೆಯ ಆಕರ್ಷಕ ಪ್ರತಿಪಾದನೆಯ ನೆನಪು ಬರುತ್ತದೆ. ಆದರೆ ಪ್ಲೇಟೋನ ವಿಶಾಲ ಭೂಮಿಕೆ ಗೀತೆಯಲ್ಲಿ ಇಲ್ಲ, ಇಷ್ಟು ಬಾಹ್ಯ ಸಾಮ್ಯವು ಸಾಕು.

## IV

### ಇನ್ನೂ ಅಂತಃಸಾಮ್ಯದ ಸೌಂದರ್ಯ (inner-perfection)

೧) ಪೈಥ್ಯಾಗೋರಾಸ ಪಂಥೀಯ ದೇವರು One (I); ಇವನು Ten (ದಶ ಅಂಗುಲ) ಇದ್ದಾನೆ.

೨) ಕ್ರೈಸ್ತ ಪಂಥವನ್ನು ಪ್ರೇರಿಸಿದ ಶ್ರೇಯಸ್ಸು ಪ್ಲೇಟೋನಿಗಿಂತಲೂ ಪೈಥ್ಯಾಗೋರಾಸನಿಗೇ ಸಲ್ಲುತ್ತದೆ ಎಂದು ರಸೆಲ್ಲ ನಿಃಸಂದಿಗ್ಧ ರೀತಿಯಲ್ಲಿ ಹೇಳಿದ್ದಾರೆ.

ಕ್ರೈಸ್ತ ಪಂಥದಲ್ಲಿ Candle light = ಜ್ಯೋತಿರ್ಲಿಂಗಕ್ಕೆ ಇರುವ ಮಹತ್ತ್ವವು ನಿಷ್ಕಾರಣವಲ್ಲ.

'ಮಾತು (ಜ್ಞಾನ) ಎಂಬುದು ಜ್ಯೋತಿರ್ಲಿಂಗ'

೩) ಪ್ಲೇಟೋನು 'Reason' ಇದಕ್ಕೇ ಅಗ್ರಪಟ್ಟ ಕೊಟ್ಟಿದ್ದಾನೆ.

'ಭಗ್'ವತ್ ಗೀತೆಯಲ್ಲಿ ಬುದ್ಧಿ ಭಗವಂತ ಇವರ ಸಾಹಚರ್ಯವನ್ನು ಹೇಳಲಾಗಿದೆ.

ಪ್ಲೇಟೋನು, Reason belongs to man : the person ಎಂದು ಸೂಚ್ಯವಾಗಿ ಹೇಳಿದ್ದಾನೆ (ಗೆರೆಹಾಕಿದುದ್ದು ನಾನು). Reason= 'ಬುದ್ಧಿ' ನರ (ಳ) ಅಂಗವಾಗಿಯೇ ಇರುತ್ತದೆ, ಎಂದು ಅರಿಸ್ಟೋಟ್ಲ, ಸೂಚಿಸಿರುವಲ್ಲಿ ಮಾರ್ಮಿಕ ಅರ್ಥವಿದೆ. ಈ ಬುದ್ಧಿ, 'ತಲೆ'ಯಿಂದ ಹೊರಡುತ್ತದೆ! ಭಾರತೀಯ ದಿವ್ಯಾಧ್ಯಾತ್ಮವು ಈ 'ತಲೆ'(ನಾಗನ ಹೆಡೆಯ ರತ್ನ) ಸೂರ್ಯ (ಸದೃಶ) ಎಂದು ಬಣ್ಣಿಸಿದ್ದಾರೆ.

ಆದರೆ ಇದು, ಇಜಿಪ್ತ 'ಕ'= ಲಿಂಗೋದ್ಭವ ನಾಗನ ಹೆಡೆಯ ರತ್ನ= ಸೂರ್ಯ ಎಂಬ ಹಾವಿನ ಪ್ರತಿಮೆಯಲ್ಲಿಯೇ ಇದೆ. (ವೈವಸ್ವತ, ಚಿತ್ರ, ಪು. ೧೯೨).

ಳ) ಪ್ಲೇಟೋನ Reason Geometer ಇದು, ಭೂಮಿಯನ್ನು ಅಳೆವ ಪೈಥ್ಯಾಗೋರಸನ Limit ಇದನ್ನು ಹೋಲುತ್ತದೆ. (History of Western Philosophy P. 56)

ೞ) ಸ್ಥಳವನ್ನು 'Receptacle of all things' 'ಧಾರಣೀ'ದೇವಿ ಎಂಬ ರೂಪದಲ್ಲಿ ಕಂಡ ಪ್ಲೇಟೋ, 'ಕಾಲ' ತತ್ತ್ವವನ್ನು, 'Reason' ಅಗ್ನಿಸ್ತಂಭ=ಝು ಊಸರೂಪದಲ್ಲಿ ಕಂಡಿರಲಿಕ್ಕೆಬೇಕು.

ಪೈಥ್ಯಾಗೋರಾಸ ಪಂಥೀಯರಲ್ಲಿ ಝುಊಸನು ಭೂಮಿಯ ಮಧ್ಯದ ಅಗ್ನಿಸ್ತಂಭ ಅಥವಾ towerಎಂದು ನಂಬುಗೆಯು ಇತ್ತು.

ಬರ್ಟರಾಂಡ ಹೇಳುತ್ತಾರೆ ಪ್ಲೇಟೋನ 'God is Geometer' (History of Western Philosophy-P : 56)

೬) Reason : (ಲಿಂಗ) ಉಪಾಸಕರೆಲ್ಲ ಮೃತ್ಯುತತ್ತ್ವದ ಭಕ್ತರೇ ಆಗುತ್ತಾರೆ= ಇರುತ್ತಾರೆ;ವಿರಕ್ತ ಪಂಥದಲ್ಲಿ ಐಹಿಕ ಜೀವನವು ತುಚ್ಛ ತಿರಸ್ಕಾರಾರ್ಹ ಎಂದು ನಂಬುಗೆಯು ಇರುತ್ತದೆ.

ಐನ್ಸಟನ್ನರ Inner Perfection 'ಈ ಸೂತ್ರವನ್ನು, ವೈಚಾರಿಕ ಆಕೃತಿಗಳು ಸನಾತನವಿರುತ್ತವೆ, ಎಂದು ನಾನು ಗ್ರಹಿಸಿಕೊಂಡಿದ್ದೇನೆ. ಈ ಲಿಂಗ ಪೂಜಕರು ವೃತ್ತಾಕೃತಿಯ ಕಾಲತತ್ತ್ವವನ್ನು ಸ್ವೀಕರಿಸುತ್ತಾರೆ. "ಇಲ್ಲಿ

ಇರುವುದು ಸುಷ್ಮ್ನನೆ; ಅಲ್ಲಿ ಇರುವುದು ನಮ್ಮ ಮನೆ" ಎಂಬ ದೃಷ್ಟಿಕೋನವು ತಲೆದೋರುತ್ತದೆ.

ಪ್ಲೇಟೋನ conception of the body as the prison and Tomb of the soul ಇದು ಪೈಥ್ಯಾಗೋರಸನ ವಿಚಾರವೇ ಆಗಿದೆ. ಪೈಥ್ಯಾಗೋರಸನು ದೇಹವನ್ನು ಪಿರಾಮಿಡ=ಗೋರಿ=ವೃಂದಾವನ ಎಂದು ಬಗೆಯಲು ಬೋಧಿಸಿದ್ದಾನೆ. ಪ್ಲೇಟೋನ 'ಸರಿಯಾದ ನಿರ್ದೋಷ ತತ್ತ್ವಜ್ಞಾನದ' ವ್ಯಾಖ್ಯೆ: "Correct philosophy" is defined as "practice in dying and death" and "striving after death." ಮೃತ್ಯು ತತ್ತ್ವದ ಉಪಾಸನೆ ಇದು.

'ಭಗ'ವಂತ ಕೃಷ್ಣನು, ತಾನು 'ಮೃತ್ಯು ಸ್ವರೂಪನಿದ್ದೇನೆ. ಎಂದು ಹೇಳಿರುವಲ್ಲಿ ಲಿಂಗೋಪಾಸನೆ ಎಂದರೆ, ಮೃತ್ಯು ಶಕ್ತಿಯ ಆರಾಧನೆಯೇ ಆಗುತ್ತದೆ.

## V

## ಅರಿಸ್ಟೋಟ್ಲನ 'ದೇವರು'

ಅರಿಸ್ಟೋಟ್ಲನು ಕಂಡುಕೊಂಡ ಜೀವನ ವಿಶ್ವದ ಆಕೃತಿಯು, ಗುರು ಪ್ಲೇಟೋನಿಂದ ತೀರ ಭಿನ್ನವಿತ್ತು. (ವೈವಸ್ವತ ಪು. ೧೧೫), ಈ ಅರಿಸ್ಟೋಟ್ಲನ ದೇವರ ಬಗೆಗಿನ ಸ್ಪಷ್ಟೀಕರಣವನ್ನೂ, ಈ ಮೊದಲು ಒಮ್ಮೆ ಹೇಳಿದ್ದಾಗಿದೆ (ಪು–೯೪).

ಪ್ಲೇಟೋನು, ದೇವರು "Rason ಬುದ್ಧಿ–ಮೇಧಾ ಇದು,belongs to man, the person" ಎಂದು ಹೇಳಿ ಇಷ್ಟಕ್ಕೆ ನಿಲ್ಲಲಿಲ್ಲ. ಇದರ ಮುಂದೆ ಅರಿಸ್ಟೋಟ್ಲ ಒಂದು ವಾಕ್ಯ (Phrase) ಹೇಳಲು ಮರೆತಿಲ್ಲ, "It (Reason-ಬುದ್ಧಿ=ಮೇಧಾ) does not come into his mind," "from out of doors" ಈ ಸ್ಪಷ್ಟೀಕರಣದ ಅವಶ್ಯಕತೆಯು ಏನು ಇತ್ತು ?

ಅರಿಸ್ಟೋಟ್ಲನು Nous : mind ಉಪಾಸಕನಾಗಿದ್ದನು. ಈ 'ಮನು' ಜನಲ್ಲಿ 'ಮನಸ್ಸು' ಸದಾ ಇದ್ದರೂ, Nous (ಪ್ರಜ್ಞೆ) ಇದು 'mind' ಮನಸ್ಸಿನ ಜೊತೆಗೆ ಇದ್ದೇ ಇರುತ್ತದೆ, ಎಂಬ ಭರವಸೆಯಿಲ್ಲ. ಪ್ರಜ್ಞೆಯು ಅಂಶಃ ಉಪಜ್ಞೆ. ಈ 'ಉಪಜ್ಞಾತ' ಇದು ಉಪದೇಶೇನ ವಿನಾ ಜ್ಞಾನ' ಸಂಗತಿ,

ವಿಚಾರ, ಇರುತ್ತದೆ; ಇದು ಹೊರಗಿನಿಂದ ಹೊಳೆದದ್ದು, ಹೊರಗಿನಿಂದ ಫಕ್ಕನೆ ಬಂದದ್ದು ಆಗುತ್ತದೆ.

ಈ ಕಾರಣದಿಂದಾಗಿ, ಈ ಮನು–ಜನಿಗೆ ಭಾರತೀಯ ಸಂಪ್ರದಾಯದಂತೆ, ಸತತವಾಗಿ 'ಸ್ವರ್' ಪಾತಳಿಯ ಸಂಪರ್ಕ, ಸಂಬಂಧ ಉಳಿಸಿಕೊಳ್ಳಬೇಕಾಗುತ್ತದೆ. ಎಂಬ ನಿಷ್ಠೆಯು ಇತ್ತು. ಮತ್ತು ಈ ಸಂಬಂಧವನ್ನು ಉಳಿಸಿಕೊಳ್ಳುವ ಹಂಚಿಕೆಯನ್ನು ನಡೆವಳಿಯ ರೂಪದಲ್ಲಿ ಉಳಿಸಿಕೊಂಡು ಬಂದದ್ದಾಗಿತ್ತು. ಹಿಂದಿನ ತಲೆಮಾರಿನವರೆಗಿನವರೆಗೆ, ಈ ತಂತ್ರವು ಯಾಂತ್ರಿಕವಾಗಿ ಯಾದರೂ ಗೊತ್ತಿತ್ತು.

'ಸವಿತೃ'—'ಧೀ' ಪ್ರಚೋದಕ ಪ್ರಜ್ಞಾರೂಪ ದೈವತ; ಇದರ ಪ್ರಾರ್ಥನೆಯನ್ನು ಪ್ರಾರಂಭಿಸುವ ಮುಂಚೆ, ಈ 'ತ್ರಿತ ಆಪ್ತ್ಯ' = ನರನು, ಮನುಜತ್ವದ ಹಂತಕ್ಕೆ ತಲುಪಲು,ವ್ಯಾಹೃತಿಗಳನ್ನು (ಪಾತಳಿ) ಸ್ಮರಿಸಿಕೊಳ್ಳುವ ವಾಡಿಕೆಯು ಉಂಟು. ಭೂಃ (ಸ್ಥೂಲ–ದೇಹ), ಭುವಃ (ಅಂತರಿಕ್ಷಂ); ಇವೆರಡರ ಪ್ರಜ್ಞೆ ಆಚೆಗೆ 'ಸ್ವಃ'. ಈ ಪಾತಳಿಯ ಮೇಲೆ : Nous ಉಂಟು, ಎಂಬ ನಿಷ್ಠೆ ಇದೆ.

ಪ್ರಾರ್ಥಿಸುವವನು, ತಾನು ದೇಹ (ಭೂ), ಪ್ರಾಣಲಿಂಗ (ಭುಃ) ಎರಡೂ ಅಲ್ಲ; ಸ್ವರ್ ಪಾತಳಿಯ ಪ್ರಜ್ಞಾಶಕ್ತಿಯ ಅಂಶ, ಎಂದು ಬಗೆದು ಪ್ರಾರ್ಥಿಸುವ ತ್ರಿತನಿಗೆ ಇಂದ್ರನ ಕ್ರಿಯಾಶಕ್ತಿಯ ಸಹಕಾರವು ಲಭಿಸುತ್ತಿತ್ತು. ತ್ರಿತನು, 'ಅಹಿ' ವೃತ್ರನನ್ನು (ಭೌತ ಕಾಲತ್ವದ) ತುಂಡರಿಸುವ ಕಾರ್ಯದಲ್ಲಿ ಇಂದ್ರನ ಸಹಕಾರಿ. ಅಥವಾ ಪ್ರಕಾಶ ಪಾತಳಿಯ, ಪ್ರಜ್ಞೆ–ಇಂದ್ರನು, ಈತನ ಸಹಕಾರದಿಂದ ಈ ಜೀವನದ ಪಾತಳಿಯ ಮೇಲಣ ಮೌಲ್ಯಗಳ ಸಂರಕ್ಷಣೆಗಾಗಿ, 'ಶಿಶ್ನೋದೇವಾಃ' ಶತ್ರುವಾಗಿ, ಈ ಪಂಥವನ್ನು ಹಗಲಿನಲ್ಲಿ ಪ್ರವೇಶಿಸದಂತೆ ನೋಡಿಕೊಳ್ಳಬೇಕಾಗುತ್ತದೆ.

ಭಾರತೀಯ ಪೂರ್ವಪರಂಪರೆಯ ಈ ಪರಿಚಯದ ಮೂಲಕ ಅರಿಸ್ಟೋಟ್ಲನ 'Nous comes alone into us from out side' ಎಂಬ ಈ ಮಾತನ್ನು ಯಥಾರ್ಥವಾಗಿ ಗ್ರಹಿಸಿಕೊಳ್ಳಲು ಅನುಕೂಲವಾಗಲಿದೆ, ಎಂದು ಹೇಳಬೇಕಾಯ್ತು.

ಪ್ಲೇಟೋನ ದೇವತಾವಿಚಾರದಲ್ಲಿ, 'Reason' ದೇಹದ ಅಂಗವೇ ಇರುವುದರಿಂದ Nous ದಹಾಗೆ, ಇದು 'does not come into his mind "from out of doors' ಎಂದು ಸ್ಪಷ್ಟೀಕರಿಸಬೇಕಾಗಿಬಂತು,

'Nous'ದೊಡನೆ ಬದ್ಧ ಅಥವಾ 'Nous' ರೂಪ 'ಮನಸ್' ತತ್ವವು ಅರಿಸ್ಟೋಟ್ಲನ ದೇವರು ಆಗಿತ್ತು 'Nourcomes from out side' ಎಂದು ಇವನು ತನ್ನ ಅನುಭವ ಹೇಳುತ್ತಾನೆ.

VI

ಇಲ್ಲಿ ಇನ್ನೊ ಒಮ್ಮೆ ಈ ಮಾನವ ಜೀವನವಿಶ್ವದ ಆಕೃತಿಯನ್ನು ಸ್ಮರಿಸಿ ಕೊಳ್ಳುವ ಅವಶ್ಯಕತೆಯು ಇದೆ. ಈ 'ಮನುಜ'ನು ಸ್ಥಳ–ಕಾಲದ (ದೇಹದ) ಆಚೆಗೆ, Nous: ಪ್ರಜ್ಞಾ ಪಾತಳಿಯು ಉಂಟು. ಇದು ಭಾರತೀಯ ಪುರಾತನರ ನಿಷ್ಠೆ, ಗ್ರೀಕ ಪುರಾತನರ ನಿಷ್ಠೆ, ಮತ್ತು ಅವೆಸ್ತಾ ಸಂಪ್ರದಾಯದ ನಿಷ್ಠೆ, ಇತ್ತು. 'ಓಹು ಮನಃ' ಇದು ಅಹುರ್‌ಮಝ್ದನ ಅಂಗ ಅಥವಾ ಕಿರಣ ರೂಪವಿದೆ' (ವೈವಸ್ವತ, ಪು. ೫೬).

ಈ 'ಮಾನವ' ಎಂಬ ಪ್ರಾಣಿಯ, 'ತಲೆ'ಯು ಬುದ್ಧಿ, ಮೇಧಾ Reason, intelligence ಇದರ ಕೇಂದ್ರ. ಈ ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತನ)ದ ಪರಿಮಿತಿಯೊಳಗೇ ಇದೆ. ಆದಕಾರಣ ಇದು 'ದೇಹಬುದ್ಧಿ'. ದೇಹದ–ಇಂದ್ರಿಯಗಳ ಅಂಗ ಜನ್ಯ. ಬುದ್ಧಿ ಸೂಚಕ 'ಮೇಧಾ' ಈ ಸಂಸ್ಕೃತ ಪರಿಭಾಷೆಯಲ್ಲಿ, 'ಮೇಧಾ' ಮೇಧಃ ದೇಹರಸ, .ಎಂಬ ಸೂಚನೆಯು ಇಲ್ಲದಿಲ್ಲ !

ಆದರೆ ಪ್ರಜ್ಞೆಯು, ಒದ್ದೆಯಾಗುವ ಬುದ್ಧಿ ಅಲ್ಲ. ಅರಿಸ್ಟೋಟ್ಲನ ದೇವತಾ ವಿಚಾರದ ಬಗೆಗೆ ಸಂದಿಗ್ಧತೆಯು ಇಲ್ಲ. ಜೀವನ ವಿಶ್ವದ ಆಕೃತಿ ಯನ್ನು ಕುರಿತು ಆತನು ಹೇಳಿರುವ ಮಾತು ಮನನೀಯವಿದೆ. ಪ್ಲೇಟೋನ 'ಆಕೃತಿಯೇ' ಆಶಯ ರೂಪಿಸುತ್ತದೆ; ಇಂದಿನ ಸಾಹಿತ್ಯಕರ ಭೂಮಿಕೆಯು ಇದು ! ಅರಿಸ್ಟೋಟ್ಲನ ನಿಷ್ಠೆಯಂತೆ ಆಶಯ:–ಗುಣವು ಆಕೃತಿಗೆ ಕಾರಣ. ವಸ್ತುಮಾತ್ರಗಳ ಅಂತಸ್ಥಗುಣದಲ್ಲಿ ಆಕೃತಿ ಹುದಗಿದೆ (immanent),

ಪ್ಲೇಟೋನ ಶ್ರದ್ಧೆಯಂತೆ ಮಾನವ (ನರ) ಮತ್ತು Reason (ಬುದ್ಧಿ) ಬೇರೆಯಲ್ಲ; ಆದಕಾರಣ ಈ ಬುದ್ಧಿ ಪ್ರಾಣಲಿಂಗದ ಅಂಗವಾಯ್ತು, ಪ್ರಾಣ ಲಿಂಗ, ಇದು ಕತ್ತಲಲ್ಲೇ ಇರಬೇಕಾದ ವಿಶ್ವನಿಯಮವನ್ನು ಯಾರೂ ಮೀರ ಲಾರರು. ಆದಕಾರಣ ಕತ್ತಲೆಯ ಅಂಗವಾದ 'ಬುದ್ಧಿಗುಣ' ಕತ್ತಲನ್ನೆ

ನಿರ್ಮಿಸಬಲ್ಲುದು. ಪ್ಲೇಟೋನು ಬೌದ್ಧಿಕ ಚಾಕಚಕ್ಯದಿಂದ 'ಕಲಾತ್ಮಕ' ಕೃತಿ ರಚಿಸಿದ್ದಾನೆ. ಅದರಲ್ಲಿ 'ಸಾಕ್ರೆಟಿಸ್, ಪ್ರೋಟಾಗೋರಾಸ, ಗೋರ್ಜಿಯಾಸ್, ಅರ್ಚಿಟಾಸ (Archytas) ಹಿರೋಕ್ಲಿಟಸ್ ಪೆರ್ಮೆನೈಡಸ್ ಇವರೆಲ್ಲರ ಅರ್ಥವು ಅವರವರ ಪಾಲಿನ ಸತ್ತ್ಯ' ಆಗುತ್ತಿದೆ !

ಆದರೆ ಅರಿಸ್ಟೋಟ್ಲನ ದೇವರು ಪ್ರಜ್ಞೆಯಂಗವಾದ ಮನಸ್‌ತತ್ತ್ವ ಎಂದು ಝೆಲ್ಲರ ಹೇಳುತ್ತಾನೆ.

"To Aristotle himself God is the mind that thinks itself is the origin of all things, and moves the world, just as the beloved object does the lover"

"....The existence of God as the first mover, he turns his attention to religious experince, He........was aware intuitively of God, For in time the absolute mind and the highest in the human mind similar in nature. He stands before the deity in reverence and wonderment. (P-198-9)

ಪ್ಲೇಟೋನ ಶ್ರದ್ಧೆಯಂತೆ ಆಕೃತಿ (ದೇಹ) ಇದು ಆಶಯ ರೂಪಿಸುತ್ತದೆ. ಆಶಯ=ಬುದ್ಧಿಗಿಂತ 'ಮೇಧಾ' ಹೆಚ್ಚು 'ಸರಸ', ಸಮರ್ಪಕವಿದೆ. ಇದು ದೇಹ ಸ್ವಭಾವದಿಂದ ಭಿನ್ನವಾಗುವುದಿಲ್ಲ.

ಈ 'ಮನು'ಜನ ಮನಸ್ಸು–ಪ್ರಜ್ಞೆ ಇದು ದೇಹದಿಂದಲೆ ಆಗಿದೆಯೆಂದಲ್ಲ. ಈ ಪ್ರಜ್ಞೆ: ಮನಸ್ಸು'ತನ್ನನ್ನು ತಾನು ನಿಮರ್ಶಿಸಿಕೊಳ್ಳಬಲ್ಲುದಲ್ಲ ! ಅರಿಸ್ಟೋಟ್ಲನ ಭಾಷೆಯಲ್ಲಿ ಇದು, thinks itself, ಈ ಗುಣಶಕ್ತಿ ಬುದ್ಧಿಗೆ ಇಲ್ಲ !

## VII

ಪ್ಲೇಟೋ ಅರಿಸ್ಟೋಟ್ಲರು ಇದ್ದದ್ದು ವಿಭಿನ್ನ ಪಾತಳಿಗಳ ಮೇಲೆ. ಪ್ಲೇಟೋ ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತನ) ಈ ವಿಭಾಗದ್ವಯದ ವೃತ್ತಾಕೃತಿಯ ಕತ್ತಲೆಯಿಂದ ಆವೃತ ಜೀವಿತದ ವೈಯಕ್ತಿಕ ಪಾತಳಿಯ ಮೇಲೆ ನಿಂತು ವಿಚಾರಿಸುತ್ತಿದ್ದನು. ಈ ಪಾತಳಿಯ ಮೇಲೆ

ಅಂತರ್ ವಿಸಂಗತಿ, ಪ್ರೇರಣಾ ದ್ವಂದ್ವವು ಅನಿವಾರ್ಯವಿದೆ. ಆದುದರಿಂದ ಇಲ್ಲಿ ಅವರವರ ಅರ್ಥ, ಅವರವರ ಪಾಲಿನ ಸತ್ಯ, ಆಗುವ ಅನಿವಾರ್ಯತೆಯು ಉಂಟು. ಇದು Emperical Knowledgeದ ಹಂತ. ಶಬ್ದ (Idea) ನಿತ್ಯ. ಈ ಶಬ್ದವೇ ಅರ್ಥವನ್ನು ನಿರ್ಮಿಸುತ್ತದೆ! ಪ್ರಾಣಲಿಂಗ ಪಾತಳಿಯ ಮೇಲೆ ಆ ಮನುಜನು, ವ್ಯಕ್ತಿ ನರ(ಳ)ನೇ ಆಗಬೇಕಾಗುತ್ತದೆ; ಆಗುತ್ತಾನೆ.

ಆದರೆ ಅರಿಸ್ಟೋಟಲ್ಲ ಈತನು ಜೀವನದ, ಸಮಾಜ, ಸಮಷ್ಟಿಯ ಪ್ರಜ್ಞಾ ಯುಕ್ತ ಮನಸ್ಸಿನ ಪಾತಳಿಯ ಮೇಲೆ ನಿಂತಿದ್ದಾನೆ. ಜೀವನ ಮತ್ತು ಜೀವಿತ ಇವೆರಡೂ ಪಾತಳಿಗಳ ನಡುವಣ ಅಂತರವು, ಪ್ರಜ್ಞೆಯ ಅಂಗವಾದ ಮನಸ್ಸಿನ ಪ್ರಾದುರ್ಭಾವದಿಂದಾಗಿ ಸಂಭವಿಸಿದೆ. ಈ ಅಂಶದ ವಿವರಣೆ ಈ ಮೊದಲಿನ ಪ್ರಕಟನೆಯಲ್ಲಿ ಬಂದಿದೆ (ವೈವಸ್ವತ, ಪು. ೮೦–೯೪).

ಪ್ರಜ್ಞೋದಯಕ್ಕೂ ಮುಂಚೆ ಸ್ಥಳ (ದೇಹ) ಮತ್ತು ಕಾಲ (ಪ್ರಾಣ ಲಿಂಗ ಚೇತನ) ಇವೆರಡೂ ಘಟ-ಸರ್ಪಗಳು ನಾಗಬಂಧದಲ್ಲಿ ಕ್ರೀಡಿಸುತ್ತಿದ್ದುವು. (ಸುಮೇಲಿನ ತ್ರೈಮತ್–ಅಪ್ಸು ದಿವ್ಯಕಥೆ ಸ್ಮರಿಸಿಕೊಳ್ಳಿ. ಪು. ೬೮) ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತನ) ಈ ನಾಗಮಿಥುನವನ್ನು: ಸ್ಥಳ ಕಾಲವನ್ನು ಇಬ್ಭಾಗಿಸುವ ಕಾರ್ಯವು ಜೀವನವಿಶ್ವಸ್ಥ ವಿಕಾಸತತ್ತ್ವದ ಪ್ರಕ್ರಿಯೆ ಯಿಂದಾಗಿ, ನಿಸರ್ಗಸ್ಥ ನಿಯಮಕ್ಕೆ ಅನುಸರಿಸಿಯೇ ಆಗಿದೆ.

ಭಾರತೀಯ ಪುರಾತನರು ಈ ಅಂಶವನ್ನು ರೂಪಕ, ದಿವ್ಯ ಕಥೆಗಳ ಮುಖಾಂತರ ವ್ಯಕ್ತಪಡಿಸಿದ್ದಾರೆ. ಈ ಮನುಜನು ತ್ರಿತ ಅಪ್ತ್ಯನಾಗುತ್ತಾನೆ! 'ಅ–ದಿತಿ' ಸ್ಥಳ–ಕಾಲದ ಏಕಾತ್ಮಕ, ಅವಿಭಾಜಿತ ಪ್ರತೀಕ. ಅ–ದಿತಿ ಪ್ರಜ್ಞೋ ದಯದಿಂದಾಗಿ ದಿತಿ ವಿಭಜಿತಳು ಆಗುತ್ತಾಳೆ! ಈ ವಿಭಜನಕ್ಕೆ ಕಾರಣನಾದ ಅಹಿಃ ವೃತ್ತಹನ್ ಇಂದ್ರನು (ಸವಿತೃವಿನ = ಪ್ರಜ್ಞೆಯ ಪರ್ಯಾಯ) ವಿಭಾಜಿತ ದಿತಿಗೆ–ಸ್ಥಳ (ಕಾಲ) ಶಕ್ತಿಗೆ ಶತ್ರುವಾಗಿ ಕಾಣುತ್ತಾನೆ! ಇನ್ನು ಈ ಹಂತದಲ್ಲಿ ಮಾಡಲಾಗಿರುವ ಕಣ್ಕಟ್ಟು, ಮೋಸ ಇದು ನಿಜವೊ? ವಿಮರ್ಶಿಸಿ ಖಾತ್ರೀ ಮಾಡಿಕೊಳ್ಳಿ.

## VIII

ಕಾಲ ತತ್ತ್ವಕ್ಕೆ ಸ್ವತಂತ್ರ ಸ್ಥಾನ ಅಸ್ತಿತ್ವವೇ ಇಲ್ಲದಿರುವಾಗ, ಈ

(ಅ)ದಿತಿ "ಇಂದ್ರಹನನ ಸಮರ್ಥ ಪುತ್ರರನ್ನು ಬಯಸಿ ಹಡೆಯು ತ್ತಾಳೆ" ಎಂದು ನಂಬಿಸಲಾಗಿರುವ ಈ ಅಂಶವು ಕೇವಲ ಕವಿಕಲ್ಪನಾ ವಿಲಾಸ ವಲ್ಲದೆ ಬೇರೆ ಏನೂ ಇಲ್ಲ. (ವೈವಸ್ವತ ಪು. ೧೦೮, ೧೧೯, 'ಸ್ಥಳ-ಕಾಲ' ಎಂಬುದು ಮಾಯಾವೀ, ಖೊಟ್ಟಿ, ವಿಭಾಗ, ಪು. ೯೭, ೬೪).

ವಸ್ತುಸ್ಥಿತಿಯು (as a matter of fact) ಇದು ಹೀಗಿದೆ.

ಫಕ್ತ ಸ್ಥಲ=ಬಯಲು ಉಂಟು; ಪ್ರಾಣಲಿಂಗ ಚೇತಸುವನ್ನು ಒಳ ಗೊಂಡ ಸ್ಥಲ: ಜೀವಿಗಳ—ಜೀವಲೋಕ ಪ್ರಾಣಲೋಕ ಎನಿಸುತ್ತದೆ. ಒಟ್ಟಿನಲ್ಲಿ ಈ ಸ್ಥಲವು (ಪೃಥ್ವಿ ಎನ್ನಿ) ತನ್ನ ಮೈಸುತ್ತ ಸುತ್ತುತ್ತಿದೆ. ಸ್ಥಲದ ಈ ವೃತ್ತಾಕೃತಿಯ ಗತಿಯನ್ನು ಕಾಲೀ ರೂಪದಲ್ಲಿ ಕಂಡಿದ್ದಾಗಿದೆ. 'ಕಾಲ' ಎಂಬ ಗಣ್‌ಡಿನ ಕಲ್ಪನೆಯು ಎರಡನೆಯ ಹಂತದಲ್ಲಿ ತಲೆಯೆತ್ತಿದೆ!

ಗಿರ್‌ಗಿಮ್‌ ಎಂದು ತನ್ನ ಮೈಸುತ್ತ ಸುತ್ತುತ್ತಿರುವ ಈ ಆಕೃತಿಯನ್ನೆ 'ಛಾಯಾ ಭಗವತಿ' ಎಂದು ನರ(ಳ) ಸಂಪ್ರದಾಯವು ಲೈಂಗಿಕ ಪ್ರವೃತ್ತಿಗೆ ಸುಸಂಗತವಾಗಿ ಆ ○ (ನೆಳಲು), ಇದನ್ನು 'ಭಗ' [o] ಎಂದು ಪೂಜಿಸ ತೊಡಗಿದ್ದಾಗಿದೆ.

ಋಗ್ವೇದದೊಳಗಿನ 'ಹಡಗದ (ನೌ) ರೂಪಕವು ಅಭ್ಯಸನೀಯವಿದೆ. (x. ೬೩) 'ಆದಿತಿ (ಸ್ಥಳ),' ಅಲ್ಲಿ ನೌಕೆ ಆಗಿದ್ದಾಳೆ, ಪ್ರಾಣಿಗಳು ಕುಳಿತ ಈ ನೌಕೆ ಅಂತರಿಕ್ಷದಲ್ಲಿ ಸಾಗಿದೆ. 'ಅದಿತಿಂ ನಾವಂ, ಆರುಹೇಮ ಸ್ವಸ್ತಯೇ' ಎಂಬ ಮೋಸದ ತಂತ್ರವು ಇದು!

ಮೋಸ! ಎನ್ನಲು ಕಾರಣವಿದೆ; ಕಂನಾಡ ಪ್ರಾಜ್ಞರು, ಈ ಸ್ಥಳ (ಕಾಲ)ವನ್ನು ಬಯಲು ಎಂದಿದ್ದಾರೆ! ಪೈಥ್ಯಾಗೋರಾಸಪಂಥದಲ್ಲೂ ಇದನ್ನು void, Vaccum ಸಂಕೇತದಿಂದ ಸೂಚಿಸಲಾಗಿದೆ.

ಅಲ್ಲದೆ, ವ್ಯಕ್ತಿ ಸಾಪೇಕ್ಷ 'ಸ್ಥಳ' (ದೇಹ) ರೂಪ ಈ ನೌಕೆಯು, ಅಮರವಲ್ಲ! ಈ ದೇಹರೂಪೀ ಸ್ಥಲದ ಉದ್ದಳತೆಯನ್ನೇ, ನಾವು ಆಯುರ್ಮಾನ=ಕಾಲ; ಅವಧಿ ಎಂದು ಹೇಳುವ ವಾಡಿಕೆಯಿದೆ. ಆದರೆ, ಈ 'ಕಾಲ' ಎಂಬುದು ವ್ಯಕ್ತಿ ಸಾಪೇಕ್ಷ ಸ್ಥಳದ ಉದ್ದಳತೆ! ಇದು! ನಿಜವಾದ ಕಾಲ ಇಲ್ಲನೇ ಅಲ್ಲ.

ಈ ವಿವರಣೆಯಿಂದ ಅರಿಕೆಗೆ ಬರುವ ಅಂಶವು ಇಷ್ಟು: ಸ್ಥಲ: 'ಕೃಷ್ಣ ವಿವರ' [೦] ಟೊಳ್ಳು ಮಾತ್ರ ಉಂಟು, 'ಗಣ್ಣ': ಲಿಂಗ ಇದಕ್ಕೆ ಅಂತರಿಕ್ಷ ದಲ್ಲಿ ಸ್ಥಾನವೇ ಇಲ್ಲ. ಅರಿಸ್ಟೋಟ್ಲನ ಈ ವಾಕ್ಯ, ನೋಡಿ "Circular motion is the only uniform and perpetual motion" ಇದು ವ್ಯಕ್ತಿ ನಿರಪೇಕ್ಷ ಕಾಲ.

ಹೀಗಿದ್ದು ಈ ಭಗವಂತ ಸಂಥಗಳು ಗಣ್ಣ : ಲಿಂಗ=ಚರ ಲಿಂಗವು ಅಂತರಿಕ್ಷದಲ್ಲಿ 'ಉಂಟು' ಎಂದು ನಂಬಿಸಲು ಸಂಕೋಚಪಟ್ಟಿಲ್ಲ.

"ಇದನ್ನರಿತ ಅರಿಸ್ಟೋಟ್ಲನು ಆತ್ಮನ್ Soul; self ಇದನ್ನು ದೇಹ ದಿಂದ ಭಿನ್ನತತ್ತ್ವ" ಎಂದು (ಬಗೆಯಲಿಲ್ಲ.) (History of Western Philosophy p. 178) ಸ್ಥಳ-ಕಾಲ ಇದನ್ನು 'ಬಯಲು' [೦] ಎಂಬುದನ್ನು ಮನಗಂಡ ಡಾ. ಐನ್ಸಟನ್ನರು, ಸತ್ತಬಳಿಕ ಆತ್ಮ Soul (ಲಿಂಗಶರೀರ) ಹಿಂದೆ ಉಳಿಯುತ್ತದೆ" ಎಂಬ ನಂಬಿಗೆಯನ್ನು ತೀವ್ರಶಬ್ದಗಳಲ್ಲಿ ನಿಷೇಧಿಸಿದ್ದಾರೆ. He writes, either can I, nor would I, want to conceive an individual that survives his physical death, Let feeble souls, from fear or absurd egoism cherish such thoughts (Einstein, p-62)

ಆ-ತ್ಮನ್‌ತನು self=soul ಇದು ಮೋಸ. ನರ(ಳ) ಸಂಪ್ರ ದಾಯಗಳ ಕೃತಕ; ಮಾಟ, ಇದು ಅಭಾವವನ್ನು ಸ್ಥಾಯಿ ಆಗಿಸು ತ್ತಿರುವ 'ಜಾದು !'

ಜೀವನ ಮತ್ತು ಜೀವಿತ ಇವೆರಡರ ನಡುವಣ ಬಿರುಕನ್ನೇ-ಅಂತರವನ್ನೇ ಇಲ್ಲ-ವಾಗಿಸುವ ಮತ್ತು ಮನು-ಜನನ್ನು, ಮನುವೈವಸ್ವತನ ಸಂಪರ್ಕ ತಪ್ಪಿಸಿ, ಈ ಮಾನವನನ್ನು ನರ(ಳ ನ ಪಾತಳಿಯ ಮೇಲೆ ತಂದು ನಿಲ್ಲಿಸುವ ಒಂದು ಅಮೋಘ ತಂತ್ರ, ಮಂತ್ರ ಈ ಆತ್ಮನ್, ಪರಮ ಆತ್ಮನ್ ಶಬ್ದ ಪ್ರತಿಮೆ. ಈ ವಿವರಣೆ, ಈ ಮೊದಲು ಬಂದಿದೆ. (ವೈವಸ್ವತ ಪು. ೯೧-೩)

ಈ ಆತ್ಮನ್ ಪರಮ-ಆತ್ಮನ್—'ಭಗ'ವಂತನೇ, ಮನಸ್ಸು, ಪ್ರಜ್ಞೆ ಗಿಂತ ಮಿಗಿಲಾದವನಾಗಿಪ್ಪಾನೆ. 'ಆತ್ಮಾವಾ ಇದಂ ಅಗ್ರೇ ಆಸೀನ್' ಎಂದು ನಂಬಿಸುವ ಈ ಉಪನಿಷತ್ತುಗಳು, ವೇದ, 'ಅಸು'ರ ಸಂಪ್ರದಾಯ

ದುವು. ಈ ಆತ್ಮನ್=ತನು, ಪ್ರಾಣಲಿಂಗ=ಈ ಬುದ್ಧಿಯು (Reason), ಪ್ರಜ್ಞೆ: (Nous) ಇಲ್ಲವಾಗಿಸಿದೆ ಇಂದು ಪ್ರಪಂಚದೊಳಗಿಂದ !

ಇದನ್ನು ಒಪ್ಪಿದರೂ, ಆತ್ಮನ್=soul self, ಪ್ರತಿಪಾದಕ ಪ್ಲೇಟೋ, ಈತನು, ಪ್ರಜ್ಞೆ: Nous ಪ್ರತಿಪಾದಕ ಅರಿಸ್ಟೋಟ್ಲ ಇವನಿಗಿಂತ ಮುಂಚಿನವನು, ಅಲ್ಲವೇ ? ಇಲ್ಲಿ, 'ಇತಿಹಾಸ' ಏನು ಹೇಳುತ್ತದೆ ? ಪ್ರಜ್ಞೆ nous ಇದಕ್ಕಿಂತ ಆತ್ಮನ್, soul ಇದು ಮೊದಲು, ಎಂದು ಪ್ಲೇಟೋ-ಅರಿಸ್ಟೋಟ್ಲರ ಕಾಲಾನುಕ್ರಮದ ಮೂಲಕ ಹೊರಡುತ್ತಿದೆಯಲ್ಲ !

ಸಾಂಸ್ಕೃತಿಕ ಸತ್ಯಾನ್ವೇಷಣೆಯಲ್ಲಿ ಸ್ತರಗಳ ತುಲನಾತ್ಮಕ ಸಮೀಕ್ಷೆಯು ಎಲ್ಲಿಯೊ ನಡುವಣಿಂದ ಪ್ರಾರಂಭವಾದಲ್ಲಿ ಸಂಭ್ರಮಕ್ಕೆ ಇಂಬು ದೊರೆಯುತ್ತದೆ. ಈ ಅನ್ವೇಷಣೆಯಲ್ಲಿ ಪಾರಿಭಾಷಿಕ ಪದಗಳ ಇತಿಹಾಸದ ಮೂಲಕ ಈ ಸ್ತರಗಳನ್ನು ನಿರ್ದಿಷ್ಟಪಡಿಸಿ ಅರಿಯುವುದೇ ಪ್ರಶಸ್ತ ಮಾರ್ಗ.

## ಪ್ರಕರಣ ೫

# ಸಾಂಸ್ಕೃತಿಕ ಸ್ತರಗಳ ಭೂಮಿಕೆಯಿಂದ ವೇದ (ಪ್ರಜ್ಞೆ): ವಿದ್ಯೆ ಮತ್ತು ಮೇಧಾ (ಬುದ್ಧಿ): ಜ್ಞಾನ

### ಈ ಪರಿಭಾಷೆಯ ಸಮೀಕ್ಷೆ

I

ಧರ್ಮ : ಸಂಸ್ಕೃತಿಯ ಮಾಧ್ಯಮ ಭಾಷೆ; ಈ ಭಾಷೆಯು ಇತಿಹಾಸದ ಕಕ್ಷೆಗೆ ಒಳಗಾಗಿರುತ್ತದೆ.

'ಸಮಯ'ದ ಹಿನ್ನೆಲೆಯಿಲ್ಲದೆ ಯಾವ ಬಗೆಯ ಅಭಿವ್ಯಕ್ತಿ ಅಥವಾ ಆವಿಷ್ಕಾರವೂ ಶಕ್ಯವಿಲ್ಲ. 'ಮನಸು' ಜನೊಡನೆ ಎಂದರೆ ಪ್ರಜ್ಞೆಯ ಅಂಗವಾದ

ಮನಸ್‌ತತ್ತ್ವದ ಪ್ರಾದುರ್ಭಾವದೊಡನೆಯೆ ಇತಿಹಾಸವು ಆರಂಭವಾಗಿದೆ. ಆದಕಾರಣ, ಭಾಷಿಕ ಅಭಿವ್ಯಕ್ತಿಗೆ ಅಧಾರಭೂತ 'ಸಮಯ' ಎಂದರೆ ಇದು ಮನು (ವೈವಸ್ವತ) ಸಮಯವೇ ಸರಿ. ಇದನ್ನೇ ಕಾಂಟ್ Noumena ಎಂದಿದ್ದಾನೆ.

II

ಆದರೆ, 'ಸಮಯ'ದ (ಎಂದರೆ ಮಾನುಸಮಯದ) ಆಧಾರವೇ ಇಲ್ಲದ ಸಂಕೇತ, ಪ್ರತಿಮೆ, ಪ್ರತೀಕಗಳೂ ಭಾಷೆಯಲ್ಲಿ ಇರುವುದುಂಟು. ಇವೆರಡರಲ್ಲಿ ಮೊದಲನೆಯವು 'ಪ್ರಜ್ಞೆ'ಯಿಂದ ಪ್ರೇರಿತವಿರುವಂತೆ ಎರಡನೆಯವು ಬುದ್ಧಿಯ ಮೂಲಕ ಆಕಾರ ಪಡೆಯುತ್ತವೆ.

ಉದಾ : 'ಅಗ್ನಿ-ನಾರಾಯಣ', 'ಅಮೃತ್', ಅಶ್ವತ್ಥ (ವೃಕ್ಷ), ಆದಿತ್ಯ ಇತ್ಯಾದಿ. 'ಸೂರ್ಯ' ಸವಿತೃ : ವೈವಸ್ವತ್ ಈ ಮಾತುಗಳು, ಹಗಲಿನ ಪ್ರಕಾಶರೂಪ 'ಸಮಯ'ದ ಆಧಾರವುಳ್ಳವು ಆಗಿವೆ. ಇಲ್ಲಿ ಪ್ರಜ್ಞೆಯಿದೆ.

ಆದರೆ 'ಆದಿತ್ಯ', 'ಮಾರ್ತಾಂಡ' ಈ ಪದಗಳಿಗೆ ಆಧಾರ ಭೂತ ಸಮಯವು ಯಾವುದು ? ಇದನ್ನು 'ಸೂರ್ಯ' ಎಂದು ನಂಬಿಸಲಾಗಿದೆ ! ಇಲ್ಲಿ ಮೋಸವಿದೆ. ಇದು ಬೌದ್ಧಿಕ ಚಾಕಚಕ್ಯ, 'ಮೃತಾತ್ ಅಂಡಾತ್ ಜಾತ', ಎಂದು ಸಂಪ್ರದಾಯವೇ ಹೇಳುವ ಈ 'ಮಾರ್ತಾಂಡ 'ನಾಮಾನಂ' 'ಇವನು' ಸೂರ್ಯ' ಎಂದು ನಂಬಲಿಕ್ಕೆ ಆಗುವುದಿಲ್ಲ ಐನ್ಸಟನ್ನರ 'ಸತ್ಯದ ಒರೆಗಲ್ಲಿಗೆ' ಹಚ್ಚಿ ನೋಡಬಹುದು. ಮೊದಲಲ್ಲಿ 'Inner perfection': (ಆಂತರಿಕ ಅಂತಃಸಂಗತಿಯ ಸೌಂದರ್ಯ) : 'ಮಾರ್ತಾಂಡನನ್ನು, 'ಸೂರ್ಯ' ಎಂದರೆ, ಸೂರ್ಯನ ಅರ್ಥವನ್ನು ಕೋಶಗಳಲ್ಲಿ ನೋಡುವ ಆಪತ್ತು ಬರುತ್ತದೆ! ಆದರೆ ರೂಢಿಯ ದಾಸ್ಯವನ್ನು ಸ್ವೀಕರಿಸಿರುವ ನರರುಗಳು 'ಮಾರ್ತಾಂಡ'ನನ್ನು ಸೂರ್ಯನೇ ಎಂದು ಬಗೆದರೂ, 'ಸಲಿಲ (ಸರಿಲ = ಶರೀರ) ಜಲದೊಳಗಿಂದ ಹುಟ್ಟಿದನೆಂಬ ಈ 'ಮಾರ್ತಾಂಡನು', ಮರ್ತ್ಯನೇ ಆಗಬೇಕೇ ಹೊರತು ಸ್ವಯಂಪ್ರಕಾಶದ ಸೂರ್ಯನಾಗಲು ಶಕ್ಯವಿಲ್ಲ.

ಇನ್ನು 'external degree of Conformation' = ಹೊರಗಣ ಹೋಲಿಕೆಯಲ್ಲಿ ಲಭಿಸುವ ಸಾಮ್ಯದ ಪ್ರಮಾಣವನ್ನು ಪರೀಕ್ಷಿಸಿ ಅರಿಯಬಹುದು.

III

ಅದಿತಿ ಪುತ್ರ=ಆದಿತ್ಯ; ಈ ಅದಿತಿ ಪುತ್ರನೇ ಮಾರ್ತಾಂಡನು ! ಇವರಿಬ್ಬರಲ್ಲಿ ಯಾವ ಬಗೆಯ ಸಾಮ್ಯವು ಉಂಟು, ಇದನ್ನು ವಿಮರ್ಶಿಸಿ ನೋಡಬಹುದು; I) ಅದಿತಿ= **ಕುಮಾರೀ ಮಾತೆ.** ಅಜಾ ಎಂದೂ ಹೆಸರು. ಆದಕಾರಣ 'ಕುಮಾರೀ ಮಾತೆ' ಈ ಹೆಸರಿನಲ್ಲಿ ಈ 'ಕುಮಾರೀ' 'ನಿತ್ಯ ಕುಮಾರಿ' ಎಂದು ಬಗೆಯಲಾಗಿದೆ. ಆದುದರಿಂದ ಈ 'ಆದಿತ್ಯ' ಹುಟ್ಟಿದ್ದಾನೆ ಎಂಬುದೇ ಸುಳ್ಳು.

II) ಈ ಕುಮಾರೀ ಮಾತೆ, ಆದಿತಿಗೆ ಅಜಾ ಎನ್ನುವುದರಿಂದ ಈ 'ಅ–ಜಾ' ದೇವಿಯ ಮಗ 'ಅ–ಜ' ಎಂದರೂ ಹುಟ್ಟಿಲ್ಲ ಎಂದೇ ಅರ್ಥ.

III) ಮಾರ್ತಾಂಡನೇ 'ಆದಿತ್ಯ' ಆದಕಾರಣ, ಇವನು ಹುಟ್ಟಿದ್ದಾನೆ', ಎಂದರೂ ಮೃತನು ! ಒಟ್ಟಿನಲ್ಲಿ ಇವನು [o] ಶೂನ್ಯ

**ಕುಮಾರಿ ∴ ಅದಿತಿ = ಸ್ಥಳ (ಕಾಲ ಸಹಿತ)**

ಇದು ಫಕ್ತ ಸ್ಥಲವೇ ಇದೆ. ಇಲ್ಲಿ ಕಾಲ ಎಂಬುದು ಕೇವಲ ಕಾಲ್ಪನಿಕ! ಆದಕಾರಣ ಈ ಅ–ಜ=(o) ಕಾಲವು, ಇದು ಅತ್ಯಂತ ಅಭಾವವೇ ಸ್ಥಾಯಿ !

IV

ಹೀಗೆ ಮಾನವ ಭಾಷೆಯಲ್ಲಿ–ಕನಿಷ್ಠ ಪಕ್ಷಕ್ಕೆ, ನಮಗೆ ಜ್ಞಾತ ಈ ಭಾರತೀಯ ಭಾಷೆಗಳಲ್ಲಿ ಎರಡು ಸ್ತರಗಳು ಉಂಟು: I) ಮನು ಸಮಯದ ಆಧಾರದ ಮಾತು. ಮತ್ತು II) ಯಾವ ಬಗೆಯ 'ಸಮಯ'ದ ಹಿನ್ನೆಲೆಯು ಕಾಣದಿರದ ಮಾತುಗಳೂ ಉಂಟು.

ಯಾವ ಬಗೆಯ 'ಸಮಯ'ವು ಕಾಣದಿರದ ಪದಗಳಲ್ಲಿ ಎರಡು ಒಳ ಭೇದಗಳು ಆಗುತ್ತವೆ. ಭೌತ ಪಾತಳಿಯ ನಿಸರ್ಗದ ಆಗುಹೋಗುಗಳಿಗೆ, 'ಮನು' ಸಮಯದ ಆಧಾರವು ಇರುವುದಿಲ್ಲ. ಆದರೂ ಪ್ರಾಕೃತಿಕ ಜೀವಿತದ ಸಮಯವು ಆಧಾರಕ್ಕೆ ಇರುವ ಮಾತುಗಳು ಇರಬಲ್ಲುವು. ಉದಾ: ನಿಸರ್ಗದ ವರ್ಣನೆ; ಕೇವಲ ಅಸ್ತಿತ್ವ ಸೂಚಕ, ಹುಟ್ಟು ಸಾವಿನ ಸಂದರ್ಭದ ಜೀವಿತ ಸೂಚಕ ಮಾತುಗಳು.

ii) ಕೇವಲ ಕೃತಕ ಶಬ್ದ ಶಿಲ್ಪದ ಹಿನ್ನೆಲೆಯಲ್ಲಿ ಸಮಯದ ಅಭಾವವೇ ಇರಬಲ್ಲುದು; ಸೂರ್ಯ–ನಾರಾಯಣ; ನ-ಚಿಕೇತ ಅಗ್ನಿ !

ಮನುಸಮಯದ ಆಧಾರದ ಮಾತುಗಳಲ್ಲಿ ಪ್ರಜ್ಞಾಯುಕ್ತಮನಸ್ಸಿನ ಕೈವಾಡವು ಇರುತ್ತದೆ.

II) ಇದಕ್ಕೆ ಪ್ರತಿಯಾಗಿ, ಆಭಾವವೇ ಸ್ಥಾಯಿೂ ಇರುವ ಕೃತಕ ಶಬ್ದ ಶಿಲ್ಪ, ಇದರ ಶ್ರೇಯಸ್ಸು ಬುದ್ಧಿ–ಮೇಧಾಶಕ್ತಿಗೆ ಸಲ್ಲಬೇಕು. 'ಬುದ್ಧಿ' ಇದರ ತಳದಲ್ಲೇ 'ಸಮಯ'ದ ಅಭಾವವಿದೆ ! ಆದರೆ 'ಮೇಧಾ' ಇದಕ್ಕೆ 'ಯಜ್ಞ'ದ ಸಮಯದ ಆಧಾರವಿದೆ; ಈ ಯಜ್ಞವು ಯಾವುದು ? ಯೋಷಾ ವಾವ ಗೌತಮ ಅಗ್ನಿಃ ಪುರುಷೋ ವಾವ ಗೌತಮಾಗ್ನಿಃ ಇಲ್ಲಿ ಯೋನಿ ಕುಂಡವೇ ಯಜ್ಞದ ವೇದಿಕೆ. ಈ ಯಜ್ಞ ಇಂದಿನ ವೇದೋಪನಿಷತ್ತುಗಳಲ್ಲಿ ಇದೆ. ಇದು ಗೌತಮ ಸಂಪ್ರದಾಯದ ಯಜ್ಞ.

ಈ ಭಾಷೆಗಳಲ್ಲಿ ಹುದುಗಿರುವ ಈ ಉಭಯ ಪ್ರಕಾರದ ಸ್ತರಗಳ ಸ್ವರೂಪ ಆಕೃತಿಯನ್ನು ಗ್ರಹಿಸಿಕೊಳ್ಳುವುದು ಮತ್ತು ಮೇಲೆ ಸೂಚಿಸಿರುವಂತೆ ಸತ್ಯದ ವಿವಿಧ ಒರೆಗಳಿಗೆ ಹಚ್ಚಿ, ಅವುಗಳ ಆಶಯ ಸ್ವರೂಪವನ್ನು ಗ್ರಹಿಸಿ ಕೊಳ್ಳುವುದು ಕಷ್ಟ ಸಾಧ್ಯ, ಎಂದರೂ ಅಶಕ್ಯವಲ್ಲ. ಆದಕಾರಣ, ಈ ಮಾನವನ ಭಾಷಾ ಸ್ವರೂಪದಿಂದ ಅವನ ಆ ಭಾಷಿಕ ಸಮಷ್ಟಿಯ, ಸಾಂಸ್ಕೃತಿಕ ಸ್ಥಿತ್ಯಂತರದ ಇತಿಹಾಸವನ್ನು ಕ್ರೋಢೀಕರಿಸಿ ಅರಿಯುವ ಶಕ್ಯತೆಯು ಇಂದು ಕಾಣತೊಡಗಿದೆ.

ಮೇಲಣ ವಿವರಣೆಯಲ್ಲಿಯೇ ತನ್ನ ತಾನೇ ಹೊರಪಡುತ್ತಿರುವ ಐತಿಹಾಸಿಕ ಸ್ವರೂಪದ ಸತ್ಯಾಂಶವು ಮನನೀಯವಿದೆ. 'ಮನು'–ಸಮಯದ ಆಧಾರವಿರುವ ಭಾಷಿಕ ಸ್ತರಗಳ ಪೂರ್ವಪರಂಪರೆಯು, ಯಾವುದೇ ಬಗೆಯ ಸಮಯ ವಿರಹಿತ ಭಾಷಿಕ ಸ್ತರಗಳಿಗಿಂತಲೂ, ಸಾಂಸ್ಕೃತಿಕ ದೃಷ್ಟಿಯಿಂದ ಪ್ರಾಚೀನವಿರುವ ಶಕ್ಯತೆಯು ವಿಶೇಷವಿದೆ; ರಾತ್ರಸಮಯಾಚಾರದ, ಯಜ್ಞದ ಸಮಯುವು ಇದು ಮನುಸಮಯವಲ್ಲ, ಅಸುರ–ನರ ಸಮಯ. ಮನ ಸಮಯದ ತರುವಾಯದ್ದು.

ಇದನ್ನೇ ಇನ್ನೊಂದು ಬಗೆಯಲ್ಲಿ ಹೀಗೆ ಹೇಳಬಹುದು : ಪ್ರಜ್ಞಾ ಯುಕ್ತ ಮನಸ್ಸಿನ ಕೈವಾಡದ ಶಬ್ದಗಳ ಶಿಲ್ಪದ ಸೊಬಗೇ ಒಂದು ಬಗೆಯದು. ಇದು ವಿಧಾಯಕ ಸ್ವರೂಪದ ಆಶಯವನ್ನು ವ್ಯಕ್ತಪಡಿಸುವುದಲ್ಲದೆ, ಈ ಸೊಬ

ಗನ್ನು ಭಾವಿಸಿ ಅರಿಯಲು, ಅನುಭವಿಸಿ ಗ್ರಹಿಸಿಕೊಳ್ಳಲು ಶಕ್ಯವಿರುತ್ತದೆ. ಏಕೆಂದರೆ ಇದರಲ್ಲಿ ಅಂತಃಸಂಗತಿಯು ಒಳಗೊಂಡಿರುತ್ತದೆ. ಈ ಭಾಷಾ ಪ್ರಕಾರವು, ಹಗಲಿನ ಜೀವನದ ಪಾತಳಿಯ ಮೇಲಣ, ಸಮಾಜ–ಸಮಷ್ಟಿಯ ಸಂದರ್ಭದ ಬಾಳಬಗೆಯನ್ನು ಗಮನಕ್ಕೆ ತಂದುಕೊಡುತ್ತದೆ. ಏಕೆಂದರೆ ಪ್ರಜ್ಞಾಪ್ರೇರಿತ ಪದಗಳ ಸಂದರ್ಭದಿಂದ ಈ ಆಶಯವು ವ್ಯಕ್ತವಾಗಲೇಬೇಕು.

ಇದಕ್ಕೆ ಪ್ರತಿಯಾಗಿ ಇರುವ ಇನ್ನೊಂದು ಬಗೆಯ ಪದಗಳ ತಳಪಾಯದಲ್ಲಿ ಸಾಂಸ್ಕೃತಿಕ ಸಮಯದ ಅಭಾವವೇ ಎದ್ದು ಕಾಣುತ್ತಿರುವುದುಂಟು ! ಇವುಗಳಲ್ಲಿ ಅ) ನಿಸರ್ಗದ ಭೌತ ಸಮಯದ ಆಧಾರದ ಪದಗಳನ್ನುಳಿದರೆ, ಬ) ಅಭಾವವೇ ಸ್ಥಾಯಿ ಇರುವ ಆಶಯದ ಪದಗಳ ರಚನೆಯ ಈ ಶೈಲಿಯಲ್ಲಿ ಅಂತರ್–'ವಿರೋಧ, ಪ್ರೇರಣಾದ್ವಂದ್ವವು ಒಳಗೊಂಡಿರುವುದನ್ನು ಕಾಣಬಹುದಾಗಿದೆ. ಈ ಬಗೆಯ ಪದಗಳಲ್ಲಿ, ಪ್ರಜ್ಞೆಯ ಬದಲು ಬುದ್ಧಿ ವಿಲಾಸದ ಚಾಕಚಕ್ಯವು ಎದ್ದುಕಾಣುತ್ತಿರಬಹುದು.

V

'ವೇದ' (ಪ್ರಜ್ಞಾ) ಈ ಸಂಕೇತವು, 'ಮೇಧಾ' (ಬುದ್ಧಿ) ಇದಕ್ಕಿಂತಲೂ ಪುರಾತನವಿದೆ. ಇವೆರಡರ ತಳದಲ್ಲಿ ಇರುವ ಸಮಯವನ್ನು ಗ್ರಹಿಸಿಕೊಳ್ಳಲು ಶಕ್ಯವಿದೆ. ವಿದ್ ವೇದ, ವಿದ್ಯೆ ಈ ಸಂಕೇತವು ಇಂಡೋಯುರೋಪಿಯ ವಿದ್ ಆಖ್ಯಾತ ಸಾಧಿತವೆಂದು ದೃಢಪಟ್ಟಿದೆ. ಪಾಶ್ಚಾತ್ಯ ಪರಂಪರೆಯ wit, wise, wisdom ಈ ಪದಗಳು ಮೂಲದಲ್ಲಿ ವಿದ್ ಈ ಆಖ್ಯಾತಜನ್ಯವಿರುವುದಾಗಿ ತಜ್ಞರು ಕಂಡುಹಿಡಿದಿದ್ದಾರೆ.

ಇದಕ್ಕೆ ಪ್ರತಿಯಾಗಿ ಮೇಧಾ, ಇದು 'ವೇದ' ಇದಕ್ಕಿಂತ ಬಹಳ ಇತ್ತೀಚಿನದು. ಮೇಧ–ಅಶ್ವಮೇಧ; 'ಮೇಧಾ' ಈ ಶಬ್ದ ಬಳುವಳಿಯಲ್ಲಿ ಯಜ್ಞ (?) ಸಂದರ್ಭದಲ್ಲಿ ಅಗ್ನಿಗೆ ಹಾಕುವ ಹವಿಸ್ಸಿನ ಪ್ರಕಾರವು (ಮೇಧಸ್); ಇಲ್ಲಿ ಅಭಿಪ್ರೇತವಿದೆ.

'ಬುಧ'–ಅಬೋಧ್ಯಗ್ನಿ, ಉಷರ್‌ಬುಧಃ ಈ ಅಗ್ನಿಯ ಪ್ರಕಾರಗಳೂ ವಿಚಾರಾರ್ಹವಾಗಿವೆ. 'ಬುಧ' ವೇದದಲ್ಲಿ ಇದ್ದಾನೆ: ಆದರೆ 'ಬುದ್ಧಿ' ಕಾಣಿಸುವುದಿಲ್ಲ !

ಶಬ್ದ ಶಿಲ್ಪದೊಳಗಿನ ಪ್ರಕಾರಗಳನ್ನು ಅರಿಯುವ ದೃಷ್ಟಿಯಿಂದ 'ಜಾತವೇದ ಅಗ್ನಿ' ಮತ್ತು 'ನ–ಚಿಕೇತ ಅಗ್ನಿ' ಇವೆರಡನ್ನು ತುಲನಾತ್ಮಕವಾಗಿ

ಸಮೀಕ್ಷಿಸಬಹುದು. ನ–ಚಿಕೇತ ಅಗ್ನಿ ಎಂದರೆ ಬೋಧವಾಗದ ಅರಿಕೆಗೆ ಬಾರದ ಅಗ್ನಿ, 'ಜಾತವೇದ ಅಗ್ನಿ' ಎಂದರೆ ಅದೇ ತಾನೆ ಹುಟ್ಟಿರುವ ವೇದರೂಪ ಅಗ್ನಿ!, ಇದು ಬೋಧವಾಗುವ ಅಗ್ನಿ.

ಬೋಧವಾಗದ ನ–ಚಿಕೇತ ಅಗ್ನಿ ಮತ್ತು ಬೋಧವಾಗುವ; ಜಾತ ವೇದ ಅಗ್ನಿ ಇವೆರಡರಲ್ಲಿ ಯಾವುದು ಮುಂಚೆ ಗೊತ್ತಾಗಿರಬಹುದು ? ಜಾತ ವೇದನೇ, ನ–ಚಿಕೇತಕ್ಕಿಂತ ಮುಂಚೆ ಅರಿಕೆಗೆ ಬಂದಿರಲಿಕ್ಕೇ ಬೇಕಷ್ಟೆ? ಇವೆರಡರ ತಳಪಾಯದ 'ಸಮಯ' ಅಭ್ಯಸನೀಯವಿದೆ. ಮನಸ್ಸು ಆದ್ಯ ಮನು ಪ್ರಾದುರ್ಭವಿಸುವ ಸಂದರ್ಭದ 'ಸಮಯ'ದ ಹಿನ್ನೆಲೆ 'ಜಾತವೇದ ಅಗ್ನಿಗೆ' ಉಂಟು. ಆದರೆ 'ನ–ಚಿಕೇತ ಅಗ್ನಿಯ' ಹಿನ್ನೆಲೆಯು ಈ ಅಗ್ನಿಯ ಹೆಸರಿನಂತೆಯೇ ನ–ಚಿಕೇತ ಅರಿಕೆಗೆ ಬರದ್ದು ಆಗಿದೆ.

VI

ಆದಕಾರಣ 'ಜಾತವೇದ ಅಗ್ನಿ'ಯ ಶಿಲ್ಪದಲ್ಲಿ ಪ್ರಜ್ಞೆಯ ಮನಸ್ಸಿನ ಕೈವಾಡವು ಇರುವಂತೆ, 'ನ–ಚಿಕೇತಗ್ನಿಯು' ಈ 'ಕೃತಕ' (artful) ಶಿಲ್ಪದಲ್ಲಿ ಬುದ್ಧಿಯ, ಮೇಧಾ ಶಕ್ತಿಯ ಕೈವಾಡವಿದೆ ಎಂಬುದು ನಿಃಸಂದಿಗ್ಧ ವಿದೆ. ಈ 'ನ–ಚಿಕೇತಾಗ್ನಿ'ಯ ಹಿಂದೆ ಸಮಯ (ಪ್ರಕಾಶ) ಆಧಾರಕ್ಕೆ ಇಲ್ಲವೇ ಇಲ್ಲ! ಈ 'ನ–ಚಿಕೇತಾಗ್ನಿ' ಕತ್ತಲಲ್ಲಿ ಇರುವ ಅರಿಕೆಗೆ ಬರದ ಕಾಮ(ನಾ) ರೂಪ ಅಗ್ನಿ! ಋಗ್ವೇದದಲ್ಲಿ ಬಂದಿರುವ ಈ ನ–ಚಿಕೇತ ಅಗ್ನಿ"ಯ ಸೂಕ್ತದಲ್ಲಿ ಇದು 'ಬೃಹತ್ ಉಲ್ಬ'=ಯೋನಿ ಮಂಡಲವು ಎಂದು ವರ್ಣಿತವಿದೆ! (x. ೫೧). ಈ ಅಗ್ನಿ=ಯೋನಿ ಲಿಂಗ ಮತ್ತು ಈ ಪಾತಳಿಯ ಭಾಷಿಕ ಪ್ರಚೋದನೆಯ 'ಬುದ್ಧಿ' ಇವೆರಡರಲ್ಲಿ ಅನ್ಯೋನ್ಯವಿರು ತ್ತದೆ. ಗ್ರೀಕ ದಿವ್ಯಾಧ್ಯಾತ್ಮದಿಂದಲೂ ಇದಕ್ಕೆ ಪುಷ್ಟಿ ದೊರೆಯುತ್ತಿದೆ.

ಸಾಂಸ್ಕೃತಿಕ ಸ್ತರಗಳ ಬೆಳಕಿನಲ್ಲಿ, ಪ್ರಜ್ಞೆ–ಮನಸ್ಸು ಮೊದಲು ಕಾಣಿಸಿ ಕೊಂಡಿದೆಯೇ ಅಥವಾ ಬುದ್ಧಿಯಿಂದ ಪ್ರಚೋದಿತ ಮನಸ್ಸು ಮೊದಲು ಕಾಣಿಸಿಕೊಂಡಿದೆಯೇ ಇದರ ಇತ್ಯರ್ಥವಾಗಲು ಐತಿಹಾಸಿಕ ಭೂಮಿಕೆಯಿಂದ ನಡೆದ ಈ ಸಮೀಕ್ಷೆಯಲ್ಲಿ, 'ಪ್ರಜ್ಞೆಯೇ' 'ಆದಿತತ್ತ' ಎಂದೂ, 'ಮೇಧಾ–ಬುದ್ಧಿಯು' ಪ್ರಜ್ಞೆಯ ತರುವಾಯದ್ದು ಎಂದೂ ಸಪ್ರಮಾಣವಾಗಿ ಹೊರ ಪಡುತ್ತಿದೆ.

ಇಷ್ಟೇ ಅಲ್ಲ, ಇವೆರಡೂ ಸಂಪ್ರದಾಯಗಳಲ್ಲಿ ಒಂದು ಯುಗದ ಅಂತರವಿರುವುದನ್ನೂ ಇಲ್ಲಿ ಮನಗಾಣಬಹುದಾಗಿದೆ. 'ಜಾತವೇದ' ಅಗ್ನಿ : ಪ್ರಜ್ಞೆಯ –Nous ಇದರ ಉಪಾಸನೆಯು ಮೊತ್ತಮೊದಲಲ್ಲಿ, ವೈವಸ್ವತ ಮನ್ವಂತರದ ಪ್ರಧಾನ ಲಕ್ಷಣವಾಗಿದೆ; ಆಗಿತ್ತು. ವೈವಸ್ವತನನ್ನು ಎದುರಿಸಿ ತಲೆಯೆತ್ತಿ ನಿಲ್ಲುವ ಸ್ವಯಂಭೂ–ಸ್ವಾಯಂಭುವ ಎಂಬ 'ಮನು' ಮೊಗವಾಡದ ನರ(ಳ)ರು ಪ್ರಭಾವಶಾಲಿಯಾಗುವ ಈ ಯುಗದಲ್ಲಿ ನ–ಚಿಕೇತ 'ಅಗ್ನಿ'ಯ ಆರಾಧನೆಗೇ ಪ್ರಾಧಾನ್ಯವು ಬರುವ ಅನಿವಾರ್ಯತೆಯು, ಜೀವನವಿಶ್ವವನ್ನು ಆಳುವ 'ಸನಾತನ' ನಿಯಮದ ಬೆಳಕಿನಲ್ಲಿ ಅರಿಕೆಗೆ ಬರುತ್ತದೆ !

VII

ಮಾನವ ಸಂಸ್ಕೃತಿಯು ಪ್ರಜ್ಞೋದಯದಿಂದಾಗಿ ಪ್ರಾರಂಭವಾಗಿದೆ. ಈ ಅಂಶವು ಇನ್ನೊಂದು ನಿಟ್ಟಿನ ಐತಿಹ್ಯದಿಂದಲೂ ದೃಢಪಡುತ್ತದೆ.

ಹಿಂದೊಮ್ಮೆ, ಮಾನವ ಸಂಸ್ಕೃತಿಯು ಮೊತ್ತ ಮೊದಲಲ್ಲಿ ಇಜಿಪ್ತಿನಲ್ಲಿ ವೈವೆತ್ತಿತು, ಎಂಬ ಗ್ರಹಿಕೆಯು ಇತ್ತು. ಆದರೆ ಸುಮೇರ, ಅಕ್ಕಡ, ಬಾಬಿಲೋನ, ಅಸ್ಸೀರಿಯಾ ಭಾಗದ ಉತ್ಖನನದಲ್ಲಿ, ಯುಫ್ರೆಟಸ್–ತೈಗ್ರೀಸ ನದೀತೀರದ ಈ ಭಾಗದಲ್ಲಿಯೇ ಮಾನವೇತಿಹಾಸ, ಮತ್ತು ಮಾನವ ಸಂಸ್ಕೃತಿಯು ಪ್ರಾರಂಭವಾಗಿದೆ ಎಂದು ಡಾ. ಕ್ರ್ಯಾಮರ್, ಡಾ. ಫ್ರಾಂಕ್‌ಫೋರ್ಟ ಪ್ರಭೃತಿಗಳು ದೃಢಪಡಿಸಿದ್ದಾರೆ. ಇವರು ತಮ್ಮ ಸ್ಪಷ್ಟೀಕರಣಕ್ಕಾಗಿ ಎತ್ತಿಕೊಂಡ ಪ್ರಮಾಣಗಳಲ್ಲಿ, ದಿವ್ಯಕಥೆಗಳಿಗೆ ಸ್ಥಾನವಿಲ್ಲ.

ಡಾ. ಲೆವ್ಹಿಸ್ಟ್ರಾಸ್ ಹೇಳುವಂತೆ, History is continuation of Mythology ಎಂಬ ಈ ದೃಷ್ಟಿಕೋನದಿಂದ, ನಾನು, ಈ ಅಂಶವನ್ನು ೧೫/೨೦ ವರುಷಗಳ ಮೊದಲಿನಿಂದಲೇ ಸೂಚಿಸುತ್ತ ಬಂದಿದ್ದೇನೆ.

ಅಕ್ಕಡ–ಸುಮೇರ ಭಾಗದ ಆದಿ ದೈವತದ ಕಥೆಗಳಲ್ಲಿ ತೈಮತ್–ಅಸ್ಸು ಈ ಸ್ಥೂಳ (ಕಣ್) ಮತ್ತು ಕಾಲ (ಗಣ್) ರೂಪ ಎರಡು ನಾಗಗಳು ಕ್ರೀಡಿಸುತ್ತಿದ್ದ ಕವನ: ಎನುಮಾಎಲಿಶ್ ಬೆಳಕಿಗೆ ಬಂದಿದೆ.

ಈ ಕವನದಲ್ಲಿ 'ಎಂಕಿ' ಎಂದರೆ God of Wisdom ಇವನಿಂದ ಸಂಸ್ಕೃತಿಗೆ ಪ್ರಾರಂಭವಾಯಿತು ಎಂದು ಸೂಚಿತವಿದೆ. ಮರ್ಡುಕ್‌ನಿಗೆ

ಮಹತ್ವವು ಪ್ರಾಪ್ತವಾದದ್ದೂ ಇಲ್ಲಿ ಕಾಣುತ್ತದೆ. ಈ ಭಾಗದಲ್ಲಿ, ಮರ್ಡುಕ ನಿಂದ ಸರ್ಪಹನನದ ನಡೆವಳಿಯ ಅನುಕರಣವು, ಸಾಂಕೇತಿಕವಾಗಿ ಪ್ರತಿವರುಷ ನಡೆವ ವಾಡಿಕೆಯು ಇದ್ದಿತೆಂದು ಈಗ ದೃಢಪಟ್ಟಿದೆ. ಈ ಸರ್ಪಹನನದ ವೀರ ನೆಂದು ಇಂದ್ರನು ಋಗ್ವೇದದಲ್ಲಿ ವರ್ಣಿತನಿದ್ದಾನೆ.

**ಈ ಸುಮೇರ ಭಾಗದ ಸಂಸ್ಕೃತಿಯು ಏರಿಳಿತಗಳಿಂದ ಜೀವನವನ್ನು ಆಳುವ ವಿಶ್ವನಿಯಮವು ದೃಢಪಡುತ್ತಿದೆ.**

ಎಂಕಿ–ಮರ್ಡುಕ ಈ ಪ್ರಜ್ಞಾಪಾತಳಿಯ ವೀರರಿಂದ ಸ್ಥೂಳವು ಕಾಲ ರೂಪ 'ನಾಗ' (ಅಹಿಃವೃತ್ರ) ಹನನವು ಸಂಭವಿಸುತ್ತದೆ. ಈ ನೆಪದಿಂದ ಸ್ಥೂಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತನ) ಈ ಅಹಿಃವೃತ್ರನ ಭೇದ ದಿಂದಾಗಿ, ಸ್ಥೂಳ–ಕಾಲದ ಸಂದರ್ಭದ ಈ ಜೀವಿತದ ಪಾತಳಿಯ ಆಚೆಗಿನ, ಮಾನವ ಸಂಸ್ಕೃತಿ ಪ್ರೇರಕ ಪ್ರಜ್ಞಾ=ಮನಸತತ್ತ್ವದೊಡನೆ ಬರುವ ಸಂಪರ್ಕ ದಿಂದಾಗಿ ಈ ನರ (ಳ)ನಿಗೆ 'ಮನು'–ಜತ್ವವು ಲಭಿಸುತ್ತದೆ. ಮಾನವನ ಇತಿ ಹಾಸ; ಸಂಸ್ಕೃತಿಯು ಆಕಾರ ಪಡೆಯುವುದಕ್ಕೆ ಪ್ರಾರಂಭವಾಗುತ್ತದೆ.

ಆದರೆ, ಈ ಮನುಜನು: ಎಂಕಿ–ಮರ್ಡುಕ ವೈವಸ್ವತ ಮನು : ಮಾನ ವನು, ಪ್ರಜ್ಞಾ ಪಾತಳಿಯೊಡನೆ ಬಂದ ಸಂಪರ್ಕ–ಸಂಬಂಧವನ್ನು ಅನುದಿನವೂ ಉಳಿಸಿಕೊಳ್ಳುವುದು ಕರ್ತವ್ಯವಾಗುತ್ತದೆ.

ಆದರೆ ಕಾಲಕ್ರಮದಲ್ಲಿ ಈ ಜೀವಿತದ ಪಾತಳಿಯ ಮೇಲೆ ಬುದ್ಧಿಯ ಉದಯವು ಆಗುವ ಅನಿವಾರ್ಯತೆಯನ್ನು ತಪ್ಪಿಸಲು ಸಾಧ್ಯವಿಲ್ಲ; ಹೀಗೆ ತಪ್ಪಿಸಿ ಕೊಳ್ಳುವಲ್ಲಿ ಮಾನವನ ಹಾನಿಯೇ ಇದೆ. ಆದರೆ, 'ಬುದ್ಧಿಯು ಪ್ರಜ್ಞೆಯ **ಅಂಕೆಯಲ್ಲಿ ಉಳಿಯದೇ ಇದ್ದರೆ, ಈ ಪ್ರಜ್ಞೆಯೇ ಬುದ್ಧಿಯ=ನಾಗ ಲಿಂಗನ ದಾಸಿ ಆಗುವುದು ಮಾತ್ರ ತಪ್ಪಿದ್ದಲ್ಲ.**

## VII

ಭಾರತೀಯ ಸಂಸ್ಕೃತಿಯಲ್ಲಿ ಈ ತಿರುವು ಮರುವೇ ಸಂಭ ವಿಸಿದೆ. ಈ ಮಾತಿಗೆ ಪ್ರಮಾಣವೇನು ?

"ಧ್ಯಾಯೇತ್ ಸದಾ ಸವಿತುಃ ಮಂಡಲ [o] ಮಧ್ಯವರ್ತೀ ನಾರಾಯಣಃ"

ಈ ಶ್ಲೋಕವು ಮನನೀಯವಿದೆ. ಈ ಹಾರುವರೆಂಬವರಲ್ಲಿ, ಮಕ್ಕಳಿಗೆ

ಸುಸಂಸ್ಕಾರಗಳು ಆಗಬೇಕು, ಎಂಬ ದೃಷ್ಟಿಯಿಂದ ಇಂದಿಗೂ, ಎಲ್ಲ ಮಾನವ ಸಂಗಡಗಳಿಗೂ ಪ್ರಯೋಜನಕಾರಿಯಾಗಬಹುದಾದ ಆಚಾರಾಂಗಗಳು ಉಂಟು. ಇಲ್ಲಿ ಉದಹರಿಸಲಿರುವ ಆಚಾರಾಂಗವು 'ಸೂರ್ಯ ನಮುಸ್ಕಾರ'ದ ನಡೆವಳಿ. ಪ್ರಾತಃಸ್ನಾನ ಮಾಡಿ, ಪೂಜೆ, ಧ್ಯಾನಾದಿ ಕಾರ್ಯಕ್ರಮದಲ್ಲಿ ಸೂರ್ಯನಮುಸ್ಕಾರಕ್ಕೂ ಒಂದು ಸ್ಥಾನವು ಇತ್ತು. ಮಕ್ಕಳಿಗೆ ಕನಿಷ್ಟ ೧೨ ಸೂರ್ಯನಮುಸ್ಕಾರಗಳನ್ನಾದರೂ ಹಾಕಲೇಬೇಕು, ಎಂದು ಹಿರಿಯರಿಂದ ಒತ್ತಾಯಪಡಿಸಲಾಗುತ್ತಿತ್ತು. ವ್ಯಾಯಾಮದ ದೃಷ್ಟಿಯಿಂದ ಈ ಸಾಧನೆ ಉಪಯುಕ್ತವಿದೆ.

ಅಲ್ಲದೆ, ಭೌತಸ್ಥಳ-ಕಾಲದ ಆಚೆಗಿನ ಪ್ರಜ್ಞಾಸೂರ್ಯನ ಪ್ರಾರ್ಥನೆಯು ನೆಪದಿಂದ ಪ್ರಜ್ಞೆಯ=ಮನಸ್ಸಿನ=ಮನು ವೈವಸ್ವತನ ಸಂಪರ್ಕವನ್ನು ಉಳಿಸಿಕೊಳ್ಳುವ ಒಂದು ಸರ್ವೋತ್ಕೃಷ್ಟ ತಂತ್ರವೂ ಸರಿ.

ಆದರೆ, ಈ ತಂತ್ರವು, ಶಾಕ್ತಪಂಥೀಯ ಜೀವಿತದ ಪಾತಳಿಯಲ್ಲೇ. ಈ ಸಾಧಕನನ್ನು ಉಳಿಸಿಕೊಳ್ಳುವ ಮಂತ್ರ: ಮಾಟದ್ದಾಗಿದೆ! ದ್ವಾದಶ ಆದಿತ್ಯರ ಪ್ರಾರ್ಥನೆ ಆಗಿ ಪರಿಣಮಿಸಿದೆ, ಈ ಸಾಧನ! ಮಿತ್ರ, ರವಿ, ಸೂರ್ಯ, ಭಾಸ್ಕರಾದಿ ಈ ಪ್ರಕಾಶ ಶಕ್ತಿಯ ನಾಮಗಳನ್ನು ಪ್ರತಿಯೊಂದನ್ನೂ 'ಓಂ' ಕಾರ ಪೂರ್ವಕವಾಗಿ ಹೇಳುವ ವಾಡಿಕೆಯಿದೆ! ಈ 'ಓಂ' ಕಾರದ ಇತಿಮಿತಿಗಳನ್ನು ಚೆನ್ನಾಗಿ ನೆನಪಿನಲ್ಲಿ ಇಟ್ಟುಕೊಂಡು, ಈ ಓಂಕಾರದ ಲಾಭವನ್ನು ಪಡೆಯಬಹುದು ಎಂದು ಎನಿಸಿದೆ. ಆದರೆ ಈ 'ನಾದ'ದ ಪ್ರಭಾವದಲ್ಲಿ ಸಿಕ್ಕರೆ 'ಮನು'ಜನನ್ನು ನರ(ಳ)ನನ್ನಾಗಿ ಮಾರ್ಪಡಿಸುವ ಶಕ್ತಿಯು ಈ 'ಓಂ'ಕಾರ' =ಪ್ರಣವದಲ್ಲಿದೆ! ಜಾನಪದದ ಗಾದೆ: 'ಹಲ್ಲಿಲ್ಲದ ಕಪ್ಪೆ ಹಾವು ನುಂಗಿತು' ಎಂಬಲ್ಲಿ ಇದು ಕುಂನಾಡವರ ಪ್ರಜ್ಞಾನೇತ್ರಕ್ಕೆ ಸಾಕ್ಷಿ. ಇದಕ್ಕೆ ಪ್ರಮಾಣ, ಈ ನಮುಸ್ಕಾರಗಳ ಬಗೆಗೆ ಇರುವ ಧ್ಯಾನಮಂತ್ರ:

"ಧ್ಯಾಯೇತ್ ಸದಾ ಸವಿತುಃ ಮಂಡಲ [೦] ಮಧ್ಯವರ್ತೀ ನಾರಾಯಣಃ....!" ಈ ಸೂರ್ಯ-ನಾರಾಯಣ ಪ್ರತಿಮೆ ಯೋನಿ-ಲಿಂಗೈಕ್ಯ ಸೂಚಕವಿದೆ.

ಸವಿತೃ ರೂಪ ಸೂರ್ಯನು ಧೀರೂಪೀ: ಪ್ರಜ್ಞಾ ಪ್ರಚೋದಕ ಶಕ್ತಿ ಕೇಂದ್ರ. ಆದರೆ ಈ ಸವಿತೃ ದೇವನನ್ನು ಸಾವಿತ್ರೀ-ಗಾಯತ್ರೀ ರೂಪ ದಿವ್ಯಚಕ್ಷ [೦] ಹಂತಕ್ಕೆ ಮಾರ್ಪಡಿಸಿದ್ದಾಗಿದೆ. ಪ್ರಣವದ ಬಗೆಗೆ

(ವೈವಸ್ವತ, ಪು|| ೧೪೪-೧೪೨-೧೪೯), ನೋಡಿರಿ. ಈ ಸವಿತೃ ಮಂತ್ರದ ವಿಕೃತಿಯನ್ನು ಖಾತ್ರೀಮಾಡಿಕೊಳ್ಳಲು, ಬೃಹದಾರಣ್ಯಕ (೬, ೩, ೬,) ನೋಡಿಕೊಳ್ಳಿ. ವೇದದಲ್ಲಿಯೂ ಈ ಸವಿತೃವನ್ನು 'ರಾತ್ರೀಸ್ವಾಮಿ' ಆಗಿರುವ ವರುಣನಲ್ಲಿ ಕಳಿಸಿದ್ದಾಗಿದೆ !

## VIII

ರಾಷ್ಟ್ರೀಯ ಮಹತ್ತ್ವದ್ದೆಂಬ 'ಪವಿತ್ರ' ಶ್ರೀ 'ಭಗ'ವತ್ ಗೀತೆಯು ಒಳಗೊಂಡಿರುವ ಮೋಸ:

ಅಶ್ವತ್ಥವೃಕ್ಷ=ಬೆಂಕಿಯಮರ=ಅಗ್ನಿಸ್ತಂಭರೂಪೀ ಈ ಭಗವಂತನು, 'ಬುದ್ಧಿ' ತಾನು ಇದುವೆ="ಬುದ್ಧಿಮತಾಂ ಬುದ್ಧಿಃ ಅಹಂ" (೭.೧೦) ಎಂದಿದ್ದಾನೆ. ಇನ್ನೂ ಬಗೆಬಗೆಗಳಿಂದ ಪ್ರಜ್ಞೆ: ಮನಸ್ ಇದನ್ನು ಕೀಳುಗೈವ ಮಂತ್ರ: ಮಾಟ ಈ ಗೀತೆಯಲ್ಲಿ ಉಂಟು. ಮಾದರಿಗಾಗಿ ಈ ತಾರತಮ್ಯದ ಶ್ಲೋಕ ನೋಡಿಕೊಳ್ಳಿ.

ಇಂದ್ರಿಯಾಣಿ ಪರಾಣಿ ಆಹುಃ |
ಇಂದ್ರಿಯೋಭ್ಯಃ ಪರಂ ಮನಃ ||
ಮನಸಃ ತು ಪರಾ ಬುದ್ಧಿ ಃ |
ಯೋ ಬುದ್ಧೇ ಃ ಪರತಃ ತು ಸಃ (೩.೪೨).

ಈ ತಾರತಮ್ಯದಲ್ಲಿ ಬುದ್ಧಿಗೆ 'ಭಗ'ವಂತನ ಹತ್ತಿರದ ಎಂದರೆ ಎರಡನೆಯ ಸ್ಥಾನವು ಇದೆ. ಮತ್ತು ಈ ಬುದ್ಧಿ ಮನಸ್ಸಿಗಿಂತಲೂ ಶ್ರೇಷ್ಠ ಅಥವಾ ಮನಸ್ಸು ಬುದ್ಧಿಗಿಂತ ಕೆಳಗೆ-ಕೀಳು ! ಎಂದು ನಂಬಿಸಲಾಗಿದೆ ! ಆದರೆ ವಸ್ತುಸ್ಥಿತಿಯು ತೀರ ಬೇರೆಯಿದೆ. ಈ ಬುದ್ಧಿ ಹುಟ್ಟುವುದಕ್ಕೂ ಮುಂಚೆ, ಮಾನವನ ಪ್ರಾದುರ್ಭಾವಕ್ಕೆ ಆದಿಕಾರಣವೇ ಈ ಮನಸ್ಸು-ಉಪಜ್ಞೆ-ಪ್ರಜ್ಞೆ.

ಪ್ರಜ್ಞೆ=ಪ್ರಜ್ಞೆಯ ಅಂಗವಾದ ಮನಸ್ಸು ಇದನ್ನು ಬೆಲೆಗೇಡಾಗಿಸಿರುವ ಈ ತಂತ್ರದಿಂದಲೆ 'ಮನು'ಜನು ನರ(ಳ)ನಾಗಿ 'ಭಗ'ವಂತನ ದಾಸನಾಗುವ ದಿಕ್ಕಿನಲ್ಲಿ ಹೊರಟಿದ್ದಾನೆ.

## IX

'ನ'-ಚಿಕೇತ ಅಗ್ನಿ'ಯ ಉಪಾಸನೆಯತ್ತ ತಳ್ಳಿಕೊಂಡು ಹೋಗುವ

ಕಠ ಉಪನಿಷತ್ತು, 'ಭಗ'ವತ್ ಗೀತೆಯ ಮೂಲಮಾದರಿ. ಇದರಲ್ಲಿ, ಒಂದು ಅತ್ಯಂತ ಸುಂದರವೆನಿಸುವ ಸಂಮೋಹಕ ಶ್ಲೋಕದಲ್ಲಿ ಬರುವ ರಥದ ರೂಪಕವು ಚಿಂತ್ಯವಿದೆ.

ಇಂದ್ರಿಯಾಣಿ ಹಯಾನಿ ಆಹುಃ |
ಶರೀರಂ ರಥಂ ಏವ ತು||
ಬುದ್ಧಿಂ ತು ಸಾರಥಿಂ ವಿದ್ಧಿ |
ಮನಃ ಪ್ರಗ್ರಹಂ ಏವ ಚ||

ಮೇಲ್ತೋರಿಕೆಯಲ್ಲಿ ಈ ಶ್ಲೋಕದಲ್ಲಿ ಆಕ್ಷೇಪಾರ್ಹವಾದದ್ದು ಏನೂ ಇಲ್ಲ. ಆದರೆ ಇಲ್ಲಿ ಇರುವ 'ಗುಹ್ಯಾತ್ ಗುಹ್ಯತಮ' ಅರ್ಥಕ್ಕಾಗಿ ತುಲನಾತ್ಮಕ ವಿಮರ್ಶೆಯು ಸ್ವಲ್ಪ ಜರೂರು ಇದೆ. 'ರಥ'ದ ಸೊಬಗು ಇಲ್ಲಿದೆ.

ಗೀತೆಯಲ್ಲಿ ಬರುವ ನರ(ಳ) 'ರಥ' ಮತ್ತು, 'ನ–ಚಿಕೇತಾಗ್ನಿ ಉಪಾಸನೆಯು ಇರುವ ಕಠದ ಈ 'ರಥ' ಬೇರೆಯಲ್ಲ. ಈ ಅಂತಃಸಂಗತಿ ಮಾರ್ಮಿಕವಿದೆ. ಋಗ್ವೇದದಲ್ಲಿಯೇ ಈ ರಥದ ಮೂಲ ಮಾದರಿ ಇದೆ (X, ೧೩೫). ಒಬ್ಬ 'ಕುಮಾರ' ತನ್ನ ರಥವನ್ನೇರಿ ಯಮನಲ್ಲಿ ಬರುತ್ತಾನೆ. ಈ 'ರಥ'ವು 'ಅ–ಚಕ್ರಂ ರಥಂ'; ಗಾಲಿ [o] ಇಲ್ಲದ ತೇರು ಇದು. ಈ ವೇದದಲ್ಲಿ 'ತ್ರಿಚಕ್ರಂ ರಥಂ' ಸಹ ಉಂಟು. 'ಈ ಅಚಕ್ರ ರಥ', ಇದು 'ಏಕೇಷ' ಇದೆ. [ಏಕೇಷು] ಒಂದೇ ಈಸು (Pole) ಇರುವ ರಥವು ಇದು! ಇದರಲ್ಲಿ ಶ್ಲೇಷಾರ್ಥವಿದೆ. ಇಷ್–ಇಷ್ಟಬಂದ ಕಡೆಗೆ ಅಲೆಯಬಲ್ಲ 'ರಥ' ಇದು!

'ಭಗ'ವತ್‌ಗೀತೆಯ 'ರಥ'ದ ವೈಶಿಷ್ಟ್ಯವೆಂದರೆ, ಇದರ ಸಾರಥಿಯು ಸಾಕ್ಷಾತ್ ಭಗವಂತನೇ. ಈತನು ರಥದಿಂದ ಬೇರೆಯಲ್ಲ. 'ರಥದಿಂದ ಇಳಿಯಲಾರೆ' ಎಂದು ಮೊದಲೇ ಹೇಳಿದ್ದಾನೆ, ಈ 'ಸಾರಥಿ': ರಥೇನ ಸಹಿತಃ ಸಾರಥಿ ! ಈ ರಥವು ಸಾರಥಿಯ ಅಂಗವಾಗಿದೆ. 'ಕುರುಕ್ಷೇತ್ರ'ದಲ್ಲಿದ್ದು ಕಾಮರೂಪದ ರಾಸದ ಶತ್ರುವನ್ನು, ಗೆಲ್ಲಲು ಈ ರಥದಿಂದಲೇ ಯುದ್ಧ ನಡೆಯಲಿದೆ. ಕಾಮರೂಪ ಶತ್ರುವನ್ನು ಗೆಲ್ಲುವುದಾದರೆ, ಎದುರು 'ಕಾಮಿನಿಯೇ ಇರಬೇಡವೇ ? ಇದು ಈ 'ಕುರುಕ್ಷೇತ್ರದಲ್ಲಿ' ನಡೆಯಲಿರುವ ಯುದ್ಧ.

ಹಾಗಾದರೆ ಈ 'ಕುರುಕ್ಷೇತ್ರವೇ' ಕಾಮಿನಿ ಆಗಲೇಬೇಕಷ್ಟೇ ?

'ಕ್ಷೇತ್ರ'=ಭೂಮಿ ಕಾಮಿಸಿ ತಾನೆ ಯುದ್ಧ ? ಜಾಬಾಲೋಪನಿಷತ್ತಿನಲ್ಲಿ 'ಅ–ವಿಮುಕ್ತ ಕುರುಕ್ಷೇತ್ರ'ವಿದೆ! ಉಪನಿಷತ್ತುಗಳ ಸಾರ ಈ ಗೀತೆ, "ಗೀತೆಯ ಗುಹ್ಯಾರ್ಥ'ವನ್ನು ಕುರಿತು ಬರೆದಿರುವ ಪ್ರಬಂಧದಲ್ಲಿ, ಈ ರಥ'ದ ವಿಚಾರವು ಮೊದಲ ಬಾರಿ ನನ್ನ ಗಮನ ಸೆಳೆದದ್ದು. ಆ ವಿವರಣೆಯನ್ನು ಓದಬಹುದು. (ಪು. ೧೫–೨೫)

ಈ ನರ (ಳ)ನ 'ರಥ'ದ ಸಾರಥಿ, ಈ 'ನಳ'ನಲ್ಲದೆ ಬೇರೆ ಯಾರು ಇರ ಬಲ್ಲರು ? ವ್ಯಾಸನ ಗತ್ತುಗಾರಿಕೆಯ ಮೂಲಕ ಈ ವಿಚಾರವು ಸಂದಿಗ್ಧವಾಗಿದೆ. ಗೀತೆಯನ್ನು 'ಅರ್ಜುನ'ನಿಗೆ ಹೇಳಿದೆ, ಎಂದು ಮೇಲ್ತೋರಿಕೆಯ ಮಾತು ಉಂಟು; ಆದರೆ ಗೀತೆಯಲ್ಲಿಯೇ ಈ ಅರ್ಜುನ ಹೆಸರಿಗೆ ಪರ್ಯಾಯವಾಗಿ 'ನರ' ಎಂಬ ಹೆಸರೂ ಉಂಟು. ಮಹಾಭಾರತದ ಪ್ರಾರಂಭದಲ್ಲಿಯೇ ನರ : ನಾರ–ಆಯನ (ನಾರಾಯಣ) ಇವರಿಗೆ ವಂದನೆ ಇದೆ. 'ನಾರಾಯಣಂ ನಮಸ್ಕೃತ್ಯ' ಎಂಬಲ್ಲೂ ಈ ನಮಸ್ಕಾರವು ನಾರ–ಆಯನಕ್ಕೆ ಇದೆ ! ಈ ನರ(ಳ) ಎಲ್ಲ ನರ (ಳ)ರಲ್ಲಿ ಉತ್ತಮ=ಶ್ರೇಷ್ಠನಂತೆ. 'ಉತ್–ತಮ' ಎಂದರೆ ಎದ್ದು–ನಿಗುರಿ–ನಿಂತವರಲ್ಲಿ ಶ್ರೇಷ್ಠನು, ಇವನು.

### ಒಂದು ವಿಚಿತ್ರ : ಸೋಜಿಗ

ಆದರೆ ಮಹಾಭಾರತ, ಗೀತೆಯ ವ್ಯಾಸಂಗಿಗಳಿಗೆಲ್ಲ ಸೋಜಿಗ ? ಈ ಗ್ರಂಥಗಳಲ್ಲಿ ಎರಡರಲ್ಲೂ 'ನಾರಾಯಣನೇ' (ನಾರ–ಆಯನ) ಎಲ್ಲಿಯೂ ಇಲ್ಲ ! ಮಹಾಭಾರತದ ಪರಿಶಿಷ್ಟದಂತಹ ಒಂದು 'ಉಪಾಖ್ಯಾನವಾಗಿ' ಈ ಹೆಸರು ಮೂಲೆಯಲ್ಲಿದೆ ! ವಂದನಾಶ್ಲೋಕದ ಈ ನಾರ–ಅಯನ ಅಡಗಿದ ನೆಲ್ಲಿ ? ಋಗ್ವೇದದಲ್ಲೂ ಈ ಗತ್ತುಗಾರಿಕೆಯೇ ಉಂಟು. ಮೂಲಪಾಠದಲ್ಲಿ ನಾರಾಯಣ ಇಲ್ಲ; ನಾರದನೂ ಇಲ್ಲ ! ಆದರೆ 'ಇಲ್ಲ' ಎನ್ನಬೇಡಿ; ನಾರಾಯಣ (ಪರ್ವತ,) ನಾರದ ಋಷಿಗಳು ಸೂಕ್ತಕಾರ ಕವಿಗಳು ! 'ಶುಕ್ರ' (ರೇತ) ಆಚಾರ್ಯನೇ 'ಅಸು' (ಪ್ರಾಣ)ರ ಸಂಪ್ರದಾಯದ ಆದ್ಯ ಕವಿ ಅಲ್ಲವೇ ? ಈ–ತನು ವೇದದಲ್ಲಿ ಉಂಟು !

ಪುರು–ಷ=ಪುರಿ–ಶಯ(ನ)=ಗುಹೇಶ್ವರ, ವೇದದಲ್ಲಿ ಇದ್ದಾನೆ. ಆದರೆ ಈ ಸಂಗಮನಾಥ ಹೊರಗೆ ಕಂಡರೆ; ಈ ಕವಿ ಪ್ರತಿಭೆಗೇ ಕೇಡು, ಕಲಂಕ ಅಲ್ಲವೆ ? ಇದೇ ಮೇರೆಗೆ 'ಮಹಾಭಾರತ', 'ಭಗ'–ವತ' ಗೀತೆ,

ರಚಿಸಿದನೆಂಬ ಕವಿಯು ಯಾರು ? ವ್ಯಾಸ–ಗುಹೇಶ್ವರ; ಈ–ತನು ಹೊರಗೆ 'ಬಯಲಲ್ಲಿ' ಕಾಣಲು ಹೇಗೆ ಶಕ್ಯ ? ಈ ಭೌತಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗಚೇತಸ) ಈ ಸಂದರ್ಭದ ಅಸ್ತಿತ್ವವನ್ನು ಕಂನಾಡ ಶಬ್ದ ಶಿಲ್ಪಿ ಪ್ರಜ್ಞಾನೇತ್ರ ಇದನ್ನು ಬಯಲು ಎಂದು ಹೆಸರಿಸಿದ್ದು ನಿಷ್ಕಾರಣವಲ್ಲ! ದಕ್ಷಿಣ ಕಪರ್ದನ 'ವ್ಯಾಸ'ದೇವನ ಈ ರಚನಾ ಚಮತ್ಕಾರ ಇದೊಂದು ಜಾಗತಿಕ ವಿಕ್ರಮವಾಗಿದೆ.

ಇಜಿಪ್ತಿನ 'ಪಿರಾಮಿಡ್' (ಲಿಂಗದೇವನ ಗೋರಿ), ಸಮಾಧೀ ಕಟ್ಟಡ ಹೊರಗಣ್ಣಿಗೆ ಮಾತ್ರ ಕಾಣುತ್ತದೆ. ನಮ್ಮ ಭಾರತೀಯ ಯಕ್ಷ (ಯಕ್ಷಿ) ಜಕ್ಕಣ (ಲಿಂಗಣ)ನ ಶಿಲ್ಪ ಸೌಂದರ್ಯದ ಈ ವೈಭವವು, ಈ ವೇದ, ಮಹಾ ಭಾರತ–ಗೀತೆಯ ಕಟ್ಟಡದಲ್ಲಿದೆ...! ಬಯಲನ್ನು (Phenomenon) ಶಬ್ದ ದಲ್ಲಿ ಹಿಡಿದಿಟ್ಟಿರುವ ಈ ಪವಾಡ ಶೆಕ್ಸಪೀಯರಿಗೆ ಸಾಧಿಸಿದೆಯೇ? ಇಂಥ ಪವಾಡ ನಾಗ–ಲಿಂಗನಿಗೆ ನಮೋ ನಮೋ ! ಈ ನಾಗನ ವಿಷಬಾಧೆ ಭಾರತೀ ಯರ ಪ್ರಜ್ಞೆಯನ್ನು 'ಬಯಲ' ಹಂತಕ್ಕೆ ತಂದು ಈ ಪ್ರಜ್ಞೆಯನ್ನು ಬಯಲಾ ಗಿಸಿ ಬಿಟ್ಟಿರುವ ಈ ಹಂಚಿಕೆಯ ದುರ್‌ಬುದ್ಧಿಯನ್ನು ಎಷ್ಟು ಶಪಿಸಿದರೂ ಕಡಿಮೆ ! ಎಷ್ಟು 'ಛಿಃ ಥೂಃ' ಮಾಡಿದರೂ ಕಡಿಮೆ !

ಇದನ್ನು ಮನಗಾಣಿಸಲು, ಗೀತೆಯ ಹಾಗೂ ಕಠದ 'ರಥ' ನೋಡಿ: ನರ(ಳ)ನ 'ರಥ'ದ ಸಾರಥಿ 'ಭಗವಂತನಿದ್ದರೆ', 'ನಚಿಕೇತಾಗ್ನಿ' ಉಪಾಸನೆ ಯನ್ನು ಹೇಳುವ ಕಠದಲ್ಲಿ ಈ ರಥದ ಸಾರಥಿ 'ಬುದ್ಧಿ'. ಈ ಮೊದಲು 'ಭಗ' –ವಂತ ಈ ಸಮೀಕರಣವನ್ನು ವಿವರಿಸಿ ಆಗಿದೆ. ಈ ಅಂಶವೇ ಮತ್ತೆ ಇಲ್ಲಿಯೂ 'ರಥ'ದ 'ಸಾರಥಿ' ಎಂಬುದರ ಮೂಲಕವೂ 'ಭಗ–ವಂತ' [ಲಿಂಗ] ಮತ್ತು 'ಬುದ್ಧಿ' ಈ ಸಮೀಕರಣಕ್ಕೆ ಪುಷ್ಟಿದೊರೆಯುತ್ತದೆ.

ನರ(ಳ)ನ ರಥದ ಸಾರಥಿ 'ಭಗ'ವಂತನಿದ್ದರೆ 'ನಚಿಕೇತಾಗ್ನಿ' ಉಪಾಸನೆ ಯನ್ನು ಹೇಳುವ ಕಠದ 'ರಥ'ಕ್ಕೆ ಬುದ್ಧಿಯು ಸಾರಥಿ !

X

ಈ ವಿವೇಚನದ ಮುಖ್ಯ ಉದ್ದೇಶವು 'ನಿಜವಾದ ದೇವರು ಯಾವುದು?' ಪ್ಲೇಟೋನ Reason : intelligence ಅಥವಾ ಗೀತೆಯ ಬುದ್ಧಿ ಇದುವೋ?

ಅಥವಾ ಅರಿಸ್ಟೋಟ್ಲನ Nous: mind = ಪ್ರಜ್ಞೆಯ ಅಂಗವಾದ ಮನಸ್ಸೊ, = ವೈವಸ್ವತ ಮನುವೊ ?

ಈ ಸಂದೇಹ ನಿವಾರಣೆಗಾಗಿ, ಸಾಂಸ್ಕೃತಿಕ ಸ್ತರಗಳನ್ನು ಸಮೀಕ್ಷಿಸುವ ಅವಶ್ಯಕತೆಯು ಉಂಟಾಯ್ತು. ಈ ಸ್ತರಗಳ ಸಂದರ್ಭದಲ್ಲಿ ಒಂದು ಮಾತು ನಿಶ್ಚಿತವಾಯ್ತು. ಭಾಷಾ ಮಾಧ್ಯಮವು ಇಲ್ಲದೆ ಧರ್ಮ: ಸಂಸ್ಕೃತಿ ಆಕಾರ ಪಡೆಯಲಾರದು. ಈ ಭಾಷೆಗೆ 'ಸಮಯ'ದ ಆಧಾರವು ಅನಿವಾರ್ಯವಿದೆ. ಭಾಷೆಯಲ್ಲಿ, ಮನು ಸಮಯದ ಆಧಾರವಿರುವ ಪದಗಳು ಪ್ರಾಚೀನ, ಎಂಬ ಸಂಗತಿ ಹೊರವಡುತ್ತದೆ. 'ಜಾತವೇದ ಅಗ್ನಿ' ಮನುಸಮಯದ ಪ್ರಾರಂಭಸೂಚಕವಿದೆ. 'ಜಾತವೇದ' ಪದಕ್ಕೆ ಸಾಯಣರು 'ಪ್ರಜ್ಞೆ' ಎಂದು ಭಾಷ್ಯ ಮಾಡಿದ್ದಾರೆ.

ಇದಕ್ಕೆ ಪ್ರತಿಯಾಗಿ ಇರುವ ಅಗ್ನಿಯೇ ನ–ಚಿಕೇತ ಅಗ್ನಿ. ಈ 'ನಚಿಕೇತಾಗ್ನಿ' ಉಪಾಸನೆಯನ್ನು ಹೇಳುವ ಕಠ ಉಪನಿಷತ್ತಿನಲ್ಲಿ ಬರುವ 'ರಥದ ಸಾರಥಿಯು ಬುದ್ಧಿ. 'ಭಗ'–ವತ್ ಗೀತೆಯ ನರ(ಳ)ನ ರಥದ 'ಸಾರಥಿಯು ಭಗ–ವಂತ'. ಬಾಳದಾರಿಯಲ್ಲಿ ನಡೆಸಿಕೊಂಡು ಹೋಗುವ ಈ ರಥಕ್ಕೆ ಬುದ್ಧಿಯೇ ಸಾರಥಿ ಎಂದಲ್ಲಿ, ಇದು ಲೈಂಗಿಕ ಪಾತಳಿಯ ಮೇಲಣ ಬಾಳು ಆಗುವುದು ನಿಶ್ಚಿತ; ಅಥವಾ ಈ ರಥವು 'ಅರಣ್ಯಾಯನಕ್ಕೆ' ಆಮರಣ ಕುಮಾರೀ–ಕುಮಾರ ವ್ರತಿಯಾಗಿ ಬಾಳುವ ದಾರಿಗೆ ತಳ್ಳಿಕೊಂಡು ಹೋಗಲೇ ಬೇಕು. 'ಪ್ರಜ್ಞೆಯು ದೇವರು' ಎಂದಲ್ಲಿ ಮಾನವ ಜೀವನ ರೀತಿಯು ಶಕ್ಯ ವಾಗಲಿದೆ. ಬುದ್ಧಿಯೇ ದೇವರು ಆಗುವಾಗ ಇದು ನರ(ಳ)ನ ಜೀವನ ರೀತಿಗೆ ತಳ್ಳಿಕೊಂಡು ಹೋಗುವುದು ನಿಶ್ಚಿತವಿದೆ.

ಈ ಬುದ್ಧಿಯು ಅವರಿಸಿದ್ದು ಪ್ರಾಣಲಿಂಗ ಪಾತಳಿಯ ಮೇಲಣ ಬಾಳ ಬಗೆಯಲ್ಲಿ, ಎಂಬುದು ಭಾರತೀಯ ಹಾಗೂ ಗ್ರೀಕ ಪುರಾತನ ಉಲ್ಲೇಖಗಳಿಂದ ದೃಢಪಡುತ್ತದೆ.

# ಪ್ರಕರಣ ೬

# ಮಾನವನ ಬಾಳಬಗೆಯಲ್ಲಿ ಬುದ್ಧಿಯು ಅವತರಿಸಿರುವ ಸಮಯದ ಹಿನ್ನೆಲೆ

## I

## ಭಾರತೀಯ ಪೂರ್ವಪರಂಪರೆಯಲ್ಲಿ

ಸೃಷ್ಟಿಗೆ—ಸೃಜನಕ್ಕೆ, ಕಾರಣವಿರುವ ಸೃಜನ-ಜಲದೊಡನೆಯೆ ಬುದ್ಧಿಯು ಕಾಣಿಸಿಕೊಂಡಿದೆ, ಎಂಬ ಹಾಗಿನ ಒಂದು ಉಲ್ಲೇಖವು ಉಪನಿಷತ್ತಿನಲ್ಲಿ ಬರುತ್ತದೆ. (ಜೈಮಿನೀಯ ಉ. ೧.೫೬.೧) ೧) "ಆಪೋ ವಾ ಇದಂ ಅಗ್ರೇ ಮಹತ್ ಸಲಿಲಂ ಆಸೀತ್"

'ಆಪ' ಎಂಬ ಪದಕ್ಕೆ ಸಲಿಲ ಎಂಬ ಇನ್ನೊಂದು ಹೆಸರನ್ನು ಇಲ್ಲಿ ಯೋಜಿಸಲಾಗಿದೆ. 'ಸಲಿಲ' ಇದು 'ಆಪ'ದಷ್ಟು ಪ್ರಾಚೀನವಲ್ಲ. 'ಆಪೋವಾ ಅಸ್ಮಾನ್ ಮಾತರಃ (=ನೀರೇ ನಮ್ಮ ತಾಯಂದಿರು) ಈ ವಾಕ್ಯದಲ್ಲಿ ಸೃಜನಜಲಕ್ಕೆ ಸಲಿಲ ಎಂಬ ಹೆಸರು ಇಲ್ಲ. ಆದರೆ ಈಗ 'ಸಲಿಲ' ಎಂಬಲ್ಲಿ ಹೆಚ್ಚಿನ ಅರ್ಥವನ್ನು ಕಲ್ಪಿಸಲಾಗಿದೆ. ಸಲಿಲ—ಸರಿಲ—ಸರಿರ—ಶರೀರ ಈ ಅರ್ಥದ ಹತ್ತಿರ ತರಲಾಗಿದೆ. ಈ ಆಪ=ಜಲ, ಇದು ಶರೀರ (ಲಿಂಗದ) ಜಲ.

ಈ ಅರ್ಥದೊಡನೆ ಮೇಲಣ ವಾಕ್ಯದಲ್ಲಿ 'ಸಲಿಲ'ಕ್ಕೆ (ಲಿಂಗಕ್ಕೆ) ಮಹತ್ ಎಂಬ ವಿಶೇಷಣವನ್ನು ಸೇರಿಸಲಾಗಿದೆ. 'ಮಹ', ಮಹಾ, ಮಹಾನ್, ಶ್ರೇಷ್ಠ, ದೊಡ್ಡದು ಎಂಬ ಈ ಮೂಲಾರ್ಥದಲ್ಲಿ 'ಬುದ್ಧಿ' ಎಂಬ ಅರ್ಥವು ಕ್ರಮವಾಗಿ ಬಂದು ಸೇರುತ್ತದೆ.

ಈ 'ಬುದ್ಧಿ' ಹುಟ್ಟಿದ್ದು 'ಸಲಿಲ' (ಶರೀರ) ಇದರ ಸಂದರ್ಭದಿಂದ. ಈ ಬುದ್ಧಿಯು, ಹುಟ್ಟುವ ಎಡೆ ಶರೀರದಲ್ಲಿ 'ತಲೆ'. ಈ 'ತಲೆ' ಎಂಬಲ್ಲಿ ಉಭಯಾರ್ಥಗಳು ಇವೆ. ೧) ಶರೀರದ ಒಂದು ತುದಿ. ೨) ಶರೀರ=ಲಿಂಗದ ತುದಿ. ವೇದದಲ್ಲಿ ಬುದ್ಧಿದೇವಿ 'ಸರಸ್ವತಿಯಂತೆ'. 'ಅಂ—ಭೃಣಿ' ಎಂಬ ಇನ್ನೊಬ್ಬ ಕುಮಾರಿ ಇದ್ದಾಳೆ. ಇವಳು ಹೇಳುತ್ತಾಳೆ, 'ನಾನು ನನ್ನ ತಂದೆಯ 'ತಲೆ' ಯಿಂದ ಹುಟ್ಟಿರುವೆ!' 'ಅಸ್ಯಮೂರ್ಧನ್ ಮಮ ಯೋನಿಃ' (X.೧೨೫.೬)

'ಆಂ–ಭೃಣಿ' ಎಂಬಲ್ಲಿ 'ಅಂಭಸ್'=ನೀರು ಅರ್ಥವಿದೆ. ಈ ಆಂಭೃಣಿ ಈ ನೀರೇ ಬುದ್ಧಿ ಆಯ್ತು ! 'ತಲೆ'ಗೂ ಲಿಂಗಕ್ಕೂ ಸಂಬಂಧವಿದೆ. ರೇತ–ಲಿಂಗರಸ ಇದೇ ಬುದ್ಧಿ ಆಗುತ್ತದೆ. ಆದ್ದರಿಂದ ರೇತ=ಆಪ=ಬುದ್ಧಿ. "ಆಪೋ ವಾ ಅಗ್ರೇ ಮಹತ್ ಸಲಿಲಂ ಆಸೀತ್." ವೇದವಲ್ಲಿ ಮಹ, ಮಹತ್ ಎಂದು ಶ್ಲೇಷಾರ್ಥದಲ್ಲಿ ಬುದ್ಧಿ ಸೂಚಕ ಪದವು ಬಂದಿದೆ.

೨) ಛಾಂದೋಗ್ಯದಲ್ಲಿ 'ಓಜಃ' ಇದನ್ನು 'ಮಹಃ' ಎಂದು ಹೇಳಲಾಗಿದೆ. (೩. ೧೩, ೫.)

೩) ಮುಂಡಕ (ಲಿಂಗ) ಉಪನಿಷತ್ತಿನಲ್ಲಿ ಇದಕ್ಕೂ ಸ್ಪಷ್ಟವಾದ ಉಲ್ಲೇಖವಿದೆ; ಜ್ಞಾನ ಪ್ರಸಾದೇನ, ಲಭಿಸುವ ಶಾಂತಿಯ ಆಶಯವೇ, 'ನ–ಚಿಕೇತ ಅಗ್ನಿ' ಉಪಾಸನೆ ಹೇಳುವ ಕಠದಲ್ಲಿ (೨.೨೦), 'ಧಾತು ಪ್ರಸಾದಾತ್' ಲಭಿಸುತ್ತದೆ, ಎಂದು ಸೂಚಿಸಲಾಗಿದೆ. 'ಜ್ಞಾನ ಪ್ರಸಾದೇನ' ಇಲ್ಲಿ ತೃತೀಯಾ–ಕರಣಸಾಧನ ಸೂಚಕ ವಿಭಕ್ತಿ ಇದೆ. 'ಧಾತು ಪ್ರಸಾಧಾತ್' ಎಂಬಲ್ಲಿ ಪಂಚಮೀ–ಅಪಾದಾನ–ಅಗಲುವಿಕೆಯ ಸೂಚಿಕ ವಿಭಕ್ತಿ ಇರುವುದು ನಿಷ್ಕಾರಣವಲ್ಲ. 'ಮಹ' ಈ ಪದದ ಔಚಿತ್ಯವು, ತೈತ್ತೀರಿಯ ಉಪನಿಷತ್ತಿನ ಪ್ರಯೋಗದಲ್ಲಿ ಉಂಟು. ಇದರ ವಿವರಣವು ಮುಂದೆ ಬರಲಿದೆ.

## II
## ಗ್ರೀಕ ಪೂರ್ವಪರಂಪರೆಯಲ್ಲಿ

ಅರಿಸ್ಟೋಟ್ಲ ಇವನು Nous : mind (Nous = ಪ್ರಜ್ಞಾಪ್ರಕಾಶ) ಉಪಾಸಕನಿದ್ದನು. ಆದರೆ ಪ್ಲೇಟೋ, ಅರಿಸ್ಟೋಟ್ಲನ ಗುರು ಇವನು 'Reason' ಆರಾಧಿಸುತ್ತಿದ್ದನು. ಭಾರತೀಯ ಪೂರ್ವಪರಂಪರೆಯಂತೆ 'ಬುದ್ಧಿ'ಯು 'ಭಗ'–ವಂತನ ಹತ್ತಿರಕ್ಕೆ ಒಯುತ್ತದೆ. ಗೀತೆಯೇ ಹೇಳುವಂತೆ 'ಭಗ'ವಂತನೇ ಮತ್ತು 'ಬುದ್ಧಿ' ರೂಪನಿದ್ದಾನೆ; 'ಬುದ್ಧಿಮತಾಂ' ಬುದ್ಧಿಃ. ಪ್ಲೇಟೋನ 'ದೇವರು' ರಸೆಲ್ಲ ಹೇಳುವಂತೆ Geometer !

ಗುಹ್ಯಾರ್ಥದಿಂದ ಲಿಂಗ=ಬುದ್ಧಿ ಎಂಬ ಈ ಸಮೀಕರಣವು ಗೀತೆಯು ಹಾಗೂ ಕಠೋಪನಿಷತ್ತಿನ (ನರ) ರಥದ ರೂಪಕದಿಂದ ಹೊರವಡುತ್ತದೆ. ಸೋಜಿಗದ ಸಂಗತಿಯೆನ್ನುವಂತೆ, ಭಾರತೀಯ ದೇವರುಗಳ 'ರಥ'ಗಳ ಮೇಲೆ ಅಶ್ಲೀಲ ಚಿತ್ರ ಕೆತ್ತಿರುವ ಕಾರಣವೇನು ? ಈ ಪ್ರಶ್ನೆಗೆ ಉತ್ತರವು ಇಲ್ಲಿ ಇದೆ.

ದೇಗುಲಗಳಲ್ಲಿ ಗೋಡೆಗಳ ಮೇಲೆ ಲೈಂಗಿಕ ಕ್ರೀಡೆಯ ಚಿತ್ರಗಳು! ಒಡ್ಡೀ ಜಗನ್ನಾಥನ ದೇವಾಲಯ ನೋಡಿ, ನಾಚಿಕೊಂಡವರು ಇದ್ದಾರೆ. 'ಸತ್ಯ'ವು= ಅರ್ಥವು ಅಂತಃಸಂಗತಿಯಲ್ಲಿ ಇದೆ.

ಮನು (ವೈವಸ್ವತನ) ಸಮಯವು ಬೇಡವಾದ ಕಾರಣವೇನು? ಭಾಷೆ, ಧರ್ಮ, ಸಂಸ್ಕೃತಿಯು, ಈ 'ಮನು'–ಜನನ್ನು ನಿಸರ್ಗಸ್ಥ ಸ್ಥಳ–ಕಾಲ ಪಾತಳಿಯಿಂದ ಮೇಲಕ್ಕೆ ಎತ್ತಿದ್ದಾಗಿದೆ. ಇದರಿಂದ ಪ್ರಾಣಲಿಂಗ ಪಾತಳಿಗೆ–ಲೀಗ (ಹೆಂ–ಗಂ) ಶಕ್ತಿಗೆ ಅನ್ಯಾಯವಾಗಿದೆ. ಇಂಥ ಮನುವಿನ ಈ ಸೇಡು ತೀರಿಸಿಕೊಳ್ಳಲು 'ಮೇಧಾ': 'ಬುದ್ಧಿ' ಫಕ್ಕನೆ ತಲೆಯೆತ್ತಿದೆ. ಇದನ್ನು 'ಸ್ವಯಂ–ಭೂ' ಶಕ್ತಿ ಎಂಬುವ ಭಾರತೀಯ ಪಾರಿಭಾಷಿಕ ಪದವು ಸಾರ್ಥವಿದೆ.

ಈ 'ಸ್ವಯಂ'–ಭೂ ಶಕ್ತಿಗೆ 'ಸಮಯ': 'ನಿಯಮ': ಅರ್ಥ ಮಾನ್ಯವಿಲ್ಲ. 'ಅರ್ಥ' ಎಂದರೇನು? ಪರಂಪರೆಯೇ ತಾನೆ? ಚಿತ್ತಕ್ಕೆ ಎನಿಸಿದ್ದೇ ಅರ್ಥ. ಈ ಕಾರಣದಿಂದಾಗಿ ಅವರವರ ಅರ್ಥವು ಅವರವರ ಪಾಲಿನ ಸತ್ಯ, ಆಗಿದೆ; ನರ(ಳ) ಸಂಪ್ರದಾಯ ಪ್ರಬಲವಾಗಿದೆ. ಪ್ರಜ್ಞೋದಯದ ಬಳಿಕ, ಮನು–ಜರು ಈ ಸ್ಥಲ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಇವೆರಡರ ಸಂದರ್ಭದ ಅಸ್ತಿತ್ವವನ್ನು ಲೆಕ್ಕಿಸದವರಾದರು! ಅಂದು ಈ ಹಂತದ ಅಸ್ತಿತ್ವವನ್ನು ಬಯಲು = Void = Vaccum = ಟೊಳ್ಳು= ಅರ್ಥವಿಹೀನ ಎಂದು ತಿರಸ್ಕರಿಸಲಾಗುತ್ತಿತ್ತು!

ಆದರೆ, ಈ ಪರಿಸ್ಥಿತಿಜನ್ಯ ಕಾರಣದಿಂದಾಗಿ ಫಕ್ಕನೆ ಕಾಣಿಸಿಕೊಂಡ ಈ ಬುದ್ಧಿಯು, ಪ್ರಜ್ಞೆ ಮತ್ತು ಪ್ರಜ್ಞೆಯ ಅಂಗವಾದ ಮನಸ್ಸನ್ನೇ ತನ್ನ ಹಂತಕ್ಕೆ ತಂದು ನಿಲ್ಲಿಸಲು ಸಮರ್ಥವಾಗಿರುವದನ್ನು ಇಂದು ಕಾಣಬಹುದಾಗಿದೆ. 'ಇರುಳು' ಕಂಡ 'ಕೂಪ'ದಲ್ಲಿ ಹಗಲು ಬೀಳುವದೆ? ಎಂದು ಗೇಲಿ ಮಾಡುತ್ತಿದ್ದ ತ್ರಿತ ಆಪ್ತ್ಯನೇ ಈಗ ಈ ಕೂಪದಲ್ಲಿ ಸಿಕ್ಕಿಕೊಂಡಿದ್ದಾನೆ, ನಳನಾಗಿದ್ದಾನೆ! (ವೈವಸ್ವತ ಪು. ೯೨, ೯೬)

ಇದೆಲ್ಲ ಹಾಗೆ ಇರಲಿ. ಪ್ರಸ್ತುತ ಪ್ರಶ್ನೆ: ಗ್ರೀಕ್ ಪೂರ್ವ ಪರಂಪರೆಯಲ್ಲಿಯೂ, ಪ್ರಜ್ಞಾಯುಕ್ತ ಮನಸ್ಸಿನ ವಿಚಾರಕ್ಕೆ ಅರಿಸ್ಟೋಟ್ಲನಿಗಿಂತ ಮುಂಚಿನಿಂದಲೂ ಪ್ರಾಶಸ್ತ್ಯವು ಇತ್ತೆ? ಪ್ರಾಶಸ್ತ್ಯವು ಇದ್ದಲ್ಲಿ, 'ಪ್ರಜ್ಞಾಯುಕ್ತ'

ಮನಸ್ಸು ಬೆಲೆಗೆ ಎರವಾದ ಕಾರಣಗಳೇನು? ಅರಿಸ್ಟೋಟ್ಲ–ಪ್ಲೇಟೋರಿಗೂ ಮುಂಚಿನ ಅನ್ಯಾಕ್ಸಾಗೋರಾಸನಿಗೆ ಸಹ, ಪ್ರಜ್ಞಾಯುಕ್ತಮನಸ್ಸಿನ =Nous =mind ಇದರ ಮಹತ್ವವು ಚೆನ್ನಾಗಿ ಗೊತ್ತಿತ್ತು.

III

Nous : mind ಇದರ ಬಗೆಗಿನ ಅನ್ಯಾಕ್ಸಗೊರಾಸ (Anaxagoras, ಕ್ರಿ. ಪೂ. ೫೦೦–೪೨೮) ಈತನ ವಿಚಾರಗಳ ಪರಿಚಯುವಾದರೆ ಇವನಿಗೂ ಮೊದಲು ಇದ್ದ Nous : mind ವಿಚಾರವು, ವಿಕೃತವಾಗುತ್ತ ಬಂದುದು, ಎಂದಿನಿಂದ, ಈ ಪ್ರಶ್ನೆಯ ಉತ್ತರವು ದೊರೆತಲ್ಲದೆ, ಅನ್ಯಾಕ್ಸಾಗೊರಾಸ ಹಾಗೂ ಅರಿಸ್ಟೋಟ್ಲರ ನಿಜವಾದ ಮಹತ್ವವು ಗೊತ್ತಾಗಲಾರದು. ಐತಿಹಾಸಿಕ ಕ್ರಮದಲ್ಲಿ ಸಮೀಕ್ಷಿಸಿದರೆ, ಹೋಮರನ ಕಾಲವಲ್ಲಿಯೇ, Nous: mind ದ ಪರ್ಯಾಯವಾದ ಝೂಊಸನು, 'ಪ್ರಾಣಲಿಂಗ ಶಕ್ತಿಯಾಗಿ' ಮಾರ್ಪಟ್ಟಿದ್ದನ್ನು ಕಾಣಬಹುದಾಗಿದೆ!

ಭಾರತೀಯ ವೇದವು, ಕ್ರಿ. ಪೂ. ೧೪೦೦–೧೨೦೦ ಸುಮಾರಿನದು, ಎಂದು ಪಾಶ್ಚಾತ್ಯ ಪಂಡಿತರು ಗೊತ್ತುಪಡಿಸಿದ್ದಾರೆ. ಮತ್ತು ಗ್ರೀಕ ಮಹಾಕವಿ ಹೋಮರನು ಕ್ರಿ. ಪೂ. ೮೫೦ ಕ್ಕೆ ಮಿಕ್ಕಿ ಇರಲಾರನು, ಎಂದೂ ಹೇಳಲಾಗುತ್ತದೆ.

ಹೀಗೆ ಕಾಲದ ಉಲ್ಲೇಖ ಮಾಡಲು ಕಾರಣವಿದೆ. ವೇದದೊಳಗಿನ ನೀರೆ: ಆಂಭೃಣೀಕುಮಾರಿ, ಮತ್ತು ಹೋಮರನ ಅಥೆನಾ ಇವರಿಬ್ಬರ ಆಕೃತಿಯಲ್ಲಿ ತುಂಬಾ ಸಾಮ್ಯವಿದೆ. ಇವರಿಬ್ಬರೂ ದೇವಿಯರು ಕಾಲೀದುರ್ಗಾ ಪರ್ಯಾಯ ಎನ್ನಬಹುದು. 'ಅಕ್ಷ (ಪರ್ಣ) ಮಾಲಾಧಾರಿಣಿ, ಮತ್ತು ಯುದ್ಧಪ್ರೇರಕ ಶಕ್ತಿ. ಆಂಭೃಣೀ ಮತ್ತು ಅಥೆನಾ ಸಾಹಿತ್ಯ ಕಲೆಯು, ಹಾಗೂ ಯುದ್ಧದೇವಿಯರು ಎಂಬ ಗ್ರಹಿಕೆ ಇದೆ.

ಇವರಿಬ್ಬರೂ 'ತಂದೆಯ' 'ತಲೆ'ಯಿಂದ ಹುಟ್ಟಿದ್ದಾರೆ! ಈ ಸಾಮ್ಯದಿಂದಾಗಿ ಭಾರತದ ಪ್ರಾಚೀನ ಶಾಕ್ತ ಸಂಪ್ರದಾಯದಿಂದ ಗ್ರೀಕರು ಕೆಲವು ಆಚಾರ ವಿಚಾರ ಎತ್ತಿಕೊಂಡರು, ಎಂದು ಬಗೆಯಲಾಗುತ್ತದೆ. G. R. Mead ಎಂಬಾತನು ಬರೆದಿರುವ 'Orpheus' ಗ್ರಂಥದಲ್ಲಿ, ಈ ಸಾಮ್ಯ ವಿವರಿಸಿದ್ದಾನೆ. ಆದರೆ, ಈ ಸಂಪ್ರದಾಯವು ಇಜಿಪ್ತಿನ ಪ್ರಭಾವ, ಸುಮೇರಿನ ಪ್ರಭಾವದಲ್ಲಿ

ಮೈವೆತ್ತಿದೆ. ಭಾರತೀಯರ ಸಂಬಂಧವೇ ಇಲ್ಲ; ಹೆಚ್ಚಾದರೆ ಇರಾಣಿನ ಸಂಪರ್ಕವು ಕೆಲವರಿಗೆ ಇರಬಹುದು, ಎಂಬ ಮತದವರೂ ಇದ್ದಾರೆ.

ಆದರೆ ಇತ್ತೀಚಿನ ದೃಷ್ಟಿಕೋನದ ಮೇರೆಗೆ ಜೀವನವಿಶ್ವಸ್ಥ ಪ್ರೇರಣಾ ಕೇಂದ್ರದ ಪ್ರಭಾವ ಎಂಬ ವಿಶ್ವನಿಯಮದ ಭೂಮಿಕೆಯಿಂದ ವಿಚಾರಿಸಿದರೆ, ಯಾರು ಯಾರಿಂದ ಸ್ವೀಕರಿಸಿದರು, ಎಂಬ ವಿಚಾರವು ಗೌಣವಾಗುತ್ತದೆ. ಆಂತರಿಕ ಆಕರ್ಷಣವೇ ಇಲ್ಲದಿದ್ದರೆ, ಹೆರವರಿಂದ ಸ್ವೀಕರಿಸುವ ಮಾತು ಎಲ್ಲಿ ಬಂತು ?

ಈ ಪಾತಳಿಗಳ ಕೇಂದ್ರದ ಭೂಮಿಕೆಯಿಂದ ವಿಚಾರಿಸುವಾಗ ಸಾಂಸ್ಕೃತಿಕ ತೊಡಕನ್ನು ಗ್ರಹಿಸಿಕೊಳ್ಳುವುದು ಸುಲಭವಾಗುತ್ತದೆ. 'ಮನು'–ಜನ ಪ್ರಾದುರ್ಭಾವದೊಡನೆ ಮಾನವ ಧರ್ಮ: ಸಂಸ್ಕೃತಿಯು ಮೈದೋರುತ್ತದೆ. ಈ ಪ್ರಚೋದನೆಯ ಕೇಂದ್ರವು ಯಾವುದು? ಭೌತ ಸ್ಥಲ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಈ ವಿಭಾಗ ದ್ವಯದ ಆಚೆಗಿನ ಆಕಾಶ ತತ್ತ್ವದ ಪ್ರಕಾಶ ಪಾತಳಿಯ ಮೇಲಿನಿಂದ, ಈ ಪ್ರಜ್ಞಾಯುಕ್ತ ಮನಸ್ಸಿಗೆ ಪ್ರೇರಣೆಯು ಲಭಿಸುತ್ತದೆ.

ಭಾರತೀಯ ವಿವಸ್ವನ್ ಹಾಗೂ ಸವಿತೃ, ಗ್ರೀಕರ ಝ್ಯೂಸ್ ರೋಮನ್‌ರ ಜ್ಯುಪಿಟರ್, ಅವೆಸ್ತದ ಆಹುರ (ಮಜ್ದ) ಇವು ಮಾನವ ಧರ್ಮ: ಸಂಸ್ಕೃತಿಯ ಪ್ರೇರಣಾ ಕೇಂದ್ರಗಳು.

ಆದರೆ, 'ಮನು'ಜತ್ವವು ಲಭಿಸಿದ ಬಳಿಕ ಕೆಲ ಅವಧಿಯ ತರುವಾಯ, ಈ 'ಮನು'–ಜನಿಗೆ ಸ್ಥಲ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಈ ವಿಭಾಗ ದ್ವಯದ ಬಗೆಗಿನ ಆಸಕ್ತಿ, ಆಕರ್ಷಣವು ಹೆಚ್ಚಿದಂತೆ, ಇವನು ತನ್ನ ಸ್ಥಲ–ಕಾಲದ ಆಚೆಗಿನ ಪಾತಳಿಯೊಡನೆ ಇರುವ–ಇದ್ದ ಸಂಪರ್ಕವನ್ನು ಕಡೆಗಣಿಸತೊಡಗುತ್ತಾನೆ; ಮರೆತೂ ಬಿಡುತ್ತಾನೆ! ಆದರೆ ಅನ್ಯಾಕ್ಸಾಗೊರಾಸ ನಂತಹರಿಗೆ ಅಲ್ಪಸ್ವಲ್ಪ ಪೂರ್ವ ಪರಂಪರೆಯ ನೆನಪು ಉಳಿಯುತ್ತದೆ.

## IV

'Nous : mind' ಇದಕ್ಕೇ, ಪ್ರಾಶಸ್ತ್ಯವಿದ್ದ ಯುಗ, ಮತ್ತು Reason: Intelligence ಇದಕ್ಕೆ ಪ್ರಾಶಸ್ತ್ಯವು ಪ್ರಾಪ್ತವಾಗಿರುವ ಯುಗ, ಇವೆರಡರ ನಡುವಣ ಅವಧಿಯಲ್ಲಿ ಕೆಲವೊಂದು ದೈವತಗಳು ಮೈವೆತ್ತಿದ್ದೂ ಆಯ್ತು.

ಭಾರತೀಯ ಪೂರ್ವ ಪರಂಪರೆಯಲ್ಲಿ, ಇವುಗಳನ್ನು ಗುರುತಿಸಿ, ಈ ಮೊದಲೊಮ್ಮೆ ಹೇಳಿದ್ದಾಗಿದೆ. ಗ್ರೀಕ, ರೋಮನ್ ಪೂರ್ವಪರಂಪರೆಯಲ್ಲಿಯೂ ಆದಿದೈವತ ಝುಉಸ್, ಜ್ಯುಪಿಟರ ಇವು ಲೈಂಗಿಕ ಪಾತಳಿಯ ಮೇಲೆ ಬರುತ್ತವೆ. ಈ ಅವಧಿಯಲ್ಲಿ 'ಟಟಾನ್' ಹೆಸರಿನಲ್ಲಿ ಒಳಗೊಳ್ಳುವ ಕ್ರೋನಸ್ (ಕಾಕ), ಸೈಕ್ಲೊಪಸ್ (ಏಕಅಕ್ಷ) ಇತ್ಯಾದಿ ದೈವತಗಳು ಆಗಿ ಅದೃಶ್ಯವಾದುವು. ಭಾರತೀಯ ಪರಂಪರೆಯಲ್ಲಿ ಆದಿಶೇಷ: ನಾಗ, ಇವನು ದೇವರಾಗುವ ಮುಂಚೆ ಭೌಮಾಸುರ 'ನಾರ–ಕ' ಎನಿಸಿದ್ದನು! ಇಂದಿನ ಕ್ರೈಸ್ತಪಂಥೀಯ 'ಕ್ರಾಸ್' ಇದು, ಟಟಾನ್ 'Brazen Serpent' ಇದರ ಪರ್ಯಾಯ!

ಗ್ರೀಕ ಪರಂಪರೆಯಲ್ಲಿ ಹಾಗೂ ಭಾರತೀಯ ಸಂಪ್ರದಾಯದಲ್ಲಿ 'ನಾಗ–ಲಿಂಗ' ಶಕ್ತಿಯ ಬಗೆಗಿನ ತಿರಸ್ಕಾರ ತುಚ್ಛಭಾವನೆಯನ್ನು ಇಲ್ಲವಾಗಿಸಿ, ಅಥವಾ ಮರೆಯಿಸಿ ಬಿಟ್ಟು, ಇದನ್ನೇ ಪೂಜಾಸ್ಥಾನವನ್ನಾಗಿಸಿರುವ ಶ್ರೇಯಸ್ಸು, ಬುದ್ಧಿಗೆ– Reason; Intelligence ಇದಕ್ಕೇ ಸಲ್ಲುತ್ತದೆ.

ಗ್ರೀಕ ಪರಂಪರೆಯಲ್ಲಿ ಈ ಸ್ಥಿತ್ಯಂತರಕ್ಕೆ ಕಾರಣರಾದವರಲ್ಲಿ ಒರ್‌ಫ್ಯೂರಿಸ ಇವನಿಗೆ ಅಗ್ರಪಟ್ಟವಿದೆ. ಆದರೆ ನಿಜವಾಗಿ ಈ ದಿವ್ಯಾಧ್ಯಾತ್ಮವನ್ನು ಶಾಸ್ತ್ರೀಯ ಮಟ್ಟದಲ್ಲಿ ರೂಪಿಸಿ ರೂಢಿಸಿದ ಶ್ರೇಯಸ್ಸು ಪೈಥ್ಯಾಗೋರಾಸನದು, ಇವನ ಪಂಥೀಯರದು.

ಒರ್‌ಫ್ಯೂರಿಸನ ಜನನ ಮತ್ತು ವಸಿಷ್ಠ–ವ್ಯಾಸರ ಜನನದಲ್ಲಿ ಸಾಮ್ಯವಿದೆ. ಇದು, ವೇದದ ಪರಿಭಾಷೆಯಲ್ಲಿ 'ರಹಸೂಃ'ಗಳ ಪರಂಪರೆ. ವಸಿಷ್ಠನು ಸೌರನೆಂಬ, ಆದರೂ 'ಆದಿತ್ಯ'ನಾಗಿ ಮಾರ್ಪಟ್ಟ 'ವರುಣ' ದೇವನಿಗೆ, ಒಬ್ಬ ಅಪ್‌ಸ್ರಲೆಯಲ್ಲಿ ಹುಟ್ಟಿದನಂತೆ. ವ್ಯಾಸನು, ಪರಾಶರನಿಂದ, ಒಬ್ಬ 'ನೀರೆ'–ಯುವತಿಯಲ್ಲಿ ಹುಟ್ಟಿದನೆಂದು ಕಥೆಯಿದೆ. ಇದೇ ಮೇರೆಗೆ ಒರ್‌ಫ್ಯೂರಿಸನು ಅಪೊಲ್ಲೋದೇವನಿಂದ ಒಬ್ಬ ಅಪ್‌ಸ್ರಲೆಯಲ್ಲಿ ಹುಟ್ಟಿದನಂತೆ.

ಒರ್‌ಫ್ಯೂರಿಸನಿಗೆ ಆತನ ದೇವನಿಂದ (ಹೆರ್ಮೆಸನಿಂದ=ಬುದ್ಧಿದೇವನಿಂದ ಎಂದೂ ಹೇಳಲಾಗುತ್ತದೆ.) ಒಂದು ವಾದ್ಯವು (Lyre) ದೊರೆಕಿತಂತೆ. ಈ ವಾದ್ಯ ನುಡಿಸುವುದರೊಳಗಿನ ನೈಪುಣ್ಯದ ವರ್ಣನೆ, ಕೃಷ್ಣನ 'ಕೊಳಲ' ನಾದದ ವರ್ಣನೆಯನ್ನು ಹೋಲುತ್ತದೆ. ನನಗೆ ತಿಳಿದ ಪಟ್ಟಿಗೆ, ಇಲ್ಲಿ 'ಅನಾಹತ

ನಾದದ'='ನಾ ಪ್ರಣವನಾದದ' ಸಿದ್ಧಿಯ ವರ್ಣನೆಯು ಒಳಗೊಂಡಿದೆ. ಪ್ರಜ್ಞೆಯನ್ನು ಬಧಿರಗೊಳಿಸಲು ಈ 'ನಾದ'ಕ್ಕಿಂತ ಅಮೋಘ ಸಾಧನವು ಬೇರೊಂದಿಲ್ಲ. ಕಂನಾಡ ಪರಂಪರೆಯೊಳಗಿನ 'ನಾಗ (ಲಿಂಗ) ಸ್ವರ' ಈ ಪಾರಿಭಾಷಿಕ ಪದವು ಅಮೌಲಿಕವಿದೆ.

ಹೋಮರನ ಕಾವ್ಯದಲ್ಲಿ 'ತಂದೆಯ' 'ತಲೆ'ಯಿಂದ ಹುಟ್ಟಿದಳೆಂಬ ಅಥೆನಾ ಬುದ್ಧಿದೇವಿ. ಗ್ರೀಕ ಹಾಗೂ ಭಾರತೀಯ ಪುರಾತನರು 'ತಲೆ' ಇದು ಬುದ್ಧಿಯ ಉದ್ಗಮಕೇಂದ್ರ ಎಂದು ಬಗೆದದ್ದು ಸೋಜಿಗದ್ದಾಗಿದೆ. ಮೆದುಳು–ಬುದ್ಧಿ ಈ ಶೋಧವು ಅರ್ವಾಚೀನ ಭೌತಶಾಸ್ತ್ರಜ್ಞರದು, ಎಂದು ಬಗೆಯಲಾಗುತ್ತದೆ.

ವೈಚಾರಿಕ ಆಕೃತಿಗಳು ಸನಾತನವಾಗಿವೆ! ಹೋಮರನ ಕಾಲದಿಂದ (ಕ್ರಿ. ಪೂ. ೯೦೦–೮೦೦) ಅನ್ಯಾಕ್ಸಾಗೊರಾಸನ (ಕ್ರಿ. ಪೂ. ೫೦೦–೪೨೮) ಕಾಲದ ವರೆಗಿನ ಈ ಅವಧಿಯಲ್ಲಿ Reason ಬುದ್ಧಿಯ ಪ್ರಭಾವದಲ್ಲಿ Nous= mind=ಪ್ರಜ್ಞಾಶಕ್ತಿಯು ದುರ್ಬಲವಾಗುತ್ತ, ಬೆಲೆಗೇಡಾಗುತ್ತ ಬಂದಿತ್ತು. ಆದರೂ ಎಂತೋ ಅನ್ಯಾಕ್ಸಾಗೊರಾಸನು, ತಾನು ಅರಿತಿದ್ದ ಆ ಪರಂಪರೆಯ ವಿಚಾರವನ್ನು; ಅಂತೂ, ನಮೂದಿಸಿ ಇಟ್ಟಿದ್ದಾನೆ. ಈ ಅಂಶವು, ಭಾರತೀಯ ವೈವಸ್ವತ ಮನು ಸಂಪ್ರದಾಯವನ್ನು ಗ್ರಹಿಸಿಕೊಳ್ಳುವ ದೃಷ್ಟಿಯಿಂದ ಮನನೀಯವಿದೆ.

V

ಗ್ರೀಕರ ಪೂರ್ವ ಪರಂಪರೆಯಲ್ಲಿ ಅತ್ಯಂತ ಸೋಜಿಗದ ಸಂಗತಿಯು, ನನಗೆ ಎನಿಸಿದ್ದು; Nous=mind (ಪ್ರಜ್ಞಾಯುಕ್ತ ಮನಸ್ಸು: ವೈವಸ್ವತ ಮನು) ಇದರ ನೆನಹು, ಎಂತೋ ಈ ಅನ್ಯಾಕ್ಸಾಗೊರಾಸನಿಗೆ ಉಳಿದದ್ದು ಆಶ್ಚರ್ಯದ ಸಂಗತಿಯೇ ಸರಿ. ಈತನಿಗೆ Nous ; mind ಈ ತತ್ತ್ವದ ವಿಚಾರವನ್ನುಎತ್ತಿಹೇಳುವ ಅವಶ್ಯಕತೆಯೇ ಉಂಟಾಯ್ತು! ಈ ಅನ್ಯಾಕ್ಸಾಗೋರಾಸನಿಗೂ ಮುಂಚಿನ, ಒಬ್ಬ 'ಅವತಾರೀ ಪುರುಷ'ನೆಂಬ ಖ್ಯಾತಿಯ ಎಂಪೆಡೊಕ್ಲಸನು (ಕ್ರಿ. ಪೂ. ೪೯೫–೪೩೫) Nous : mind ಇದರ ಅಗ್ರಪಟ್ಟವನ್ನು ತಪ್ಪಿಸಿದ್ದಕ್ಕೆ ಈತನಿಗೆ ಆ ತಪ್ಪನ್ನು ತಿದ್ದುವುದು ಕರ್ತವ್ಯವೆನಿಸಿತು! ಈತನಿಗೂ Reason, Rationalism ಇದರ ಬಗೆಗಿನ ಆಕರ್ಷಣವು ಕಡಿಮೆ ಇಲ್ಲ.

ಆದರೂ ಬುದ್ಧಿ (Reason) ಮತ್ತು ಪ್ರಜ್ಞೆ (Nous) : ಇವೆರಡರಲ್ಲಿ ಪ್ರಜ್ಞಾಯುಕ್ತ ಮನಸ್ಸಿಗೇ ಆದ್ಯ ಸ್ಥಾನವು ಉಂಟು, ಎಂಬ ಬಗೆಗೆ ಇವನಿಗೆ ಸಂದೇಹವೆ ಎನಿಸಲಿಲ್ಲ. ಆದರೂ ಈತನು Reason ಮತ್ತು Nous ಇವೆ ರಡರಲ್ಲಿ ಇರುವ ಮೂಲಭೂತ ಭೇದವನ್ನು ಗ್ರಹಿಸಿಕೊಳ್ಳಲು ಸಮರ್ಥನಾಗ ಲಿಲ್ಲ. ಈ ಅಂತರವನ್ನು ಅಂತೂ, ಎಂತೋ ಅರಿಸ್ಟೊಟ್ಲನೇ ಸ್ಪಷ್ಟಪಡಿಸಿ ದ್ದಾನೆ. ಈ ಕಾರಣದಿಂದಲೆ, Nous = mind ಇದನ್ನು ಅರಿತ ಅನ್ಯಾಕ್ಸಾ ಗೊರಾಸ, ಇದರ ಬಗೆಗೆ ಇನ್ನೂ ಹೇಳಬೇಕಾಗಿತ್ತು. ಅದನ್ನು ಬಿಟ್ಟು ಬಿಟ್ಟ ನಲ್ಲ, ಎಂದು ಸೊಕ್ರೆಟಿಸ ಹಾಗೂ ಅರಿಸ್ಟೊಟ್ಲ ವಿಷಾದವನ್ನು ವ್ಯಕ್ತಪಡಿಸದೆ ಇಲ್ಲ.

'ಅವತಾರಿ' ಎಂಬ ಹಾಗೂ ಪವಾಡ ಜರುಗಿಸುತ್ತಿದ್ದನ್ನು ಕಂಡ, ಇವ ನನ್ನು ಮೆಚ್ಚಿಕೊಂಡ ಗೋರ್ಜಿಯಾಸನಿಗೆ, ಅಂದು ಗುರುವು ಎನಿಸಿದ್ದ ಎಂಪೆ ಡೊಕ್ಲಸನು, Nous = Mind ಇದಕ್ಕೆ ಅಗ್ರಸ್ಥಾನವನ್ನೀಯದಿರುವುದು ಅವನ ತತ್ತ್ವಜ್ಞಾನಕ್ಕೆ ಸುಸಂಗತವೇ ಇದೆ. ಈತನು ಗ್ರೀಕ ಪುರಾತನ ಪರಂಪರೆಯ ನಾದ-ಯೋಗಿ, ಸಿದ್ಧ ಪುರುಷನೆಂಬ ಪ್ಯಾಥ್ಯಾಗೋರಾಸನನ್ನು ಹೋಲುತ್ತಾನೆ ಕೆಲಮಟ್ಟಿಗೆ. ಏಕೆಂದರೆ, ಎಂಪೆಡೊಕ್ಲಸ ಆಧ್ಯಾತ್ಮವಾದಿ ಇದ್ದು ರಸಾಯನ ಶಾಸ್ತ್ರವನ್ನು ರೂಪಿಸಿರುವ ಆದ್ಯರಲ್ಲಿ ಇವನಿಗೆ ಮನ್ನಣೆಯ ಸ್ಥಾನವಿದೆ.

ಈ ಎಂಪೊಡೊಕ್ಲಸನು, ಜಗತ್ತಿನ ಆದಿಕಾರಣವು ಯಾವುದು ? (ಯಾವ ಮೂಲತತ್ತ್ವದಿಂದಾಗಿ, ಈ ಪ್ರಪಂಚಕ್ಕೆ ಗತಿ-ಚಾಲನೆ ದೊರೆತಿದೆಯೊ ಅದು) ಪ್ರೇಮ (Love) ಮತ್ತು ದ್ವೇಷ (Hate) ಇದುವೆ ಆಗಿದೆ, ಎಂದು ಪ್ರತಿ ಪಾದಿಸಿದ್ದಾನೆ! ಆದರೆ ಈ ' ಪ್ರೇಮ' ದ ತತ್ವಜ್ಞಾನವು ಬುದ್ಧಿ(Reason) ಹುಟ್ಟಿದ ಎಡೆಯಲ್ಲಿಯೇ ಚಿಗಿತುಕೊಂಡಿದೆ. ಇದಕ್ಕೆ ಕ್ರೈಸ್ತಪಂಥದ, ಭಾರತೀಯ ಚೈತ್ಯಪಂಥದ, ಕೃಷ್ಣ-ಪ್ರೇಮಿ ತತ್ತ್ವಜ್ಞಾನ ಇವೇ ಸಾಕ್ಷಿ. ಈ ಸಂಪ್ರದಾಯಗಳು ಸತಿ-ಪತೀ ಭಾವದ ಲಿಂಗಾಂಗ ಯೋಗದ ಭೂಮಿಕೆ ಯಲ್ಲಿಯೇ ಅಂಕುರಿಸಿವೆ. ಈ ಕಾರಣದಿಂದಲೇ ಆ ಯುಗದ ಅನುಭಾವಿ (mystic) ಅಲ್ಲ, ಎಂಬ ಅನ್ಯಾಕ್ಸಾಗೊರಸನಿಗೆ, ಸಿದ್ಧ ಎಂಪೊಡೊಕ್ಲಸನ ವಿಚಾರ ಹಿಡಿಸಲಿಲ್ಲ. 'ಪ್ರೇಮ'ಇದಕ್ಕೆ ಪ್ರತಿಯಾಗಿ ದ್ವೇಷ ಈ ಬಗೆಯ ಕ್ರಿಯೆ- ಪ್ರತಿಕ್ರಿಯೆಯ ತತ್ತ್ವವೇ ಜಗದಾದಿ ತತ್ತ್ವವಿರೋದು ಅಶಕ್ಯ ಎಂದು ಅನಿಸಿತು

ಆದರೆ ಸೋಜಿಗದ ಸಂಗತಿಯೆಂದರೆ 'ತಾನು ಕ್ರೈಸ್ತಪಂಥೀಯನಲ್ಲ'! 'ದೇವರಲ್ಲಿ ನಂಬಿಗೆ ಇಲ್ಲ'; ಎಂಬ ಆತ್ಯಂತಿಕ ಬುದ್ಧಿವಾದೀ Reason ಉಪಾಸಕ ಬರ್ಟ್ರಾಂಡ ರಸೆಲ್ಲ,ಕೊನೆಗೆ 'Love' ಇದೊಂದೇ ಶ್ರೇಷ್ಠ ತತ್ತ್ವ ಎಂಬ ವಿಚಾರಕ್ಕೆ ತಲುಪಿದ್ದಾರೆ ! Reason, Love ಇವು ಕಾಣಲು ಬೇರೆ ಎನಿಸಿದರೂ ಇವುಗಳ ಮೂಲ ಲಿಂಗಾಂಗ ಯೋಗದಲ್ಲಿಯೇ ಉಂಟು. ಇದಕ್ಕೆ ರಸೆಲ್ಲನ ಇಡೀ ಚರಿತ್ರವೇ ಸಾಕ್ಷಿ.

## VI

ಈ ಪ್ರಪಂಚದ ಗತಿಗೆ ಕಾರಣವಿರುವ ಆದಿಕಾರಣತತ್ತ್ವವು ಸರ್ವ ಸಮರ್ಥವಿರಲಿಕ್ಕೇ ಬೇಕು, ಎಂಬ ಒರೆಗಲ್ಲು ಅನ್ಯಾಕ್ಸಾಗೊರಾಸನದು! ಈತನ ದೃಷ್ಟಿಕೋನವು ಇದು :

"He thought it could only be the work of a being whose knowledge and power stand overy tbing, the work of a thinking rational almighty being of Mind or Nous.

This power of reason can only be possessed by Nous when it is mixed with nothing else and impoded by nothing else"

ಪ್ರಾಣಲಿಂಗ ಚೇತಸವು ಎಲ್ಲ ಪ್ರಾಣಿವರ್ಗಗಳಲ್ಲಿ ಉಂಟು. ಆದರೆ ಈ 'ಮನು'ಜನಲ್ಲಿ ಮಾತ್ರ, ಪ್ರಾಣಲಿಂಗ ಚೇತಸವು ಅಲ್ಲದೆ ಪ್ರಜ್ಞಾಯುಕ್ತ ಮನಸ್ ತತ್ತ್ವವೂ ಇದೆ ಅನ್ಯಾಕ್ಸಾಗೊರಾಸನು ಹೇಳುತ್ತಾನೆ; Conception of Mind distinct from matter" ಈ ಮನಸ್‌ತತ್ತ್ವವನ್ನು ಭೌತ ಎಂದು ಒಪ್ಪಿದ ಬಳಿಕ ನಿಜವಾಗಿ ಇದು ದೇಹದ ಸಾಹಚರ್ಯದಲ್ಲಿ ಇದ್ದರೂ, ಪ್ರಜ್ಞಾಯುಕ್ತ ಈ ಮನಸ್ಸು ದೇಹದ ಅಂಗವಲ್ಲ.

ಭಾರತೀಯ ಹಾಗೂ ಗ್ರೀಕ ಪುರಾತನರು, 'ತಲೆ' ಇದು Reason= ಬುದ್ಧಿಯ ಪ್ರಚೋದನಾ ಕೇಂದ್ರ ಎಂದು ಕಂಡುಕೊಂಡಿದ್ದರು. ಮತ್ತು ಈ ಬುದ್ಧಿ Reason ಇದಕ್ಕೆ 'ಅಂಗನಾಂ ರಸ' ರೇತವೇ ಪೋಷಕವಾಗಿರುವುದರಿಂದ, ಬುದ್ಧಿ ಭೌತಪಾತಳಿಯ ಶಕ್ತಿಯೇ ಆಗುತ್ತದೆ.

ಆದರೆ ಅನ್ಯಾಕ್ಸಾಗೊರಾಸನ ಜೀವನವಿಶ್ವನು (Cosmas) ಇದು,

ಮಾನವ ದೇಹದ ಆಕೃತಿಯದೇ ಇದ್ದಲ್ಲಿ, ಈ ಮಾನವನು, ತಟಸ್ಥನಾಗಿ (ಪ್ರಜ್ಞಾಯುಕ್ತ ಮನಸ್ಸಿನ ಪಾತಳಿಯ ಮೇಲಿಂದ) ಈ ವಿಶ್ವವನ್ನು ಗ್ರಹಿಸಿ ಕೊಳ್ಳುವ ಪ್ರಯತ್ನ ಪಡುವುದೇ ಅಶಕ್ಯವಿತ್ತು.

ಈ ಮಾನವನ ಅಭಿವ್ಯಕ್ತಿ ಮಾಧ್ಯಮವು ಒಳಗೊಳ್ಳುವ ಅರ್ಥ: ವಿಚಾರ ರೂಪ ಈ ಪ್ರಕಾಶತತ್ತ್ವವು ಭೌತ ವಿಶ್ವದ ಅಂಗವಲ್ಲ. ಭಾಷೆಯ ಪದಗಳ ಶಬ್ದದೇಹವು ಭೌತಪಾತಳಿಯ ಪ್ರತಿಬಿಂಬವಿದೆ. ಆದರೆ ಆಂತರಿಕ ಅರ್ಥಃ ವಿಚಾರದ ಪಾತಳಿಯು ಭೌತದ ಸ್ಥಳ-ಕಾಲದ ಆಚೆಗೆ ಇದೆ.

ಆದರೆ ಅನಾಕ್ಸಾಗೊರಾಸನ ಇತಿಮಿತಿಯು ಈ ಮುಂದಣ ವಾಕ್ಯದಲ್ಲಿ ಕಾಣಲು ದೊರೆಯುತ್ತದೆ. **Mind is absolutely simple and matter is completely composite. The former is "mixed with nothing"; "exists for itself alone"; finest purest of all things; it possesses complete knowledge of things and the greatest strength. (P. 61)**

ಹೀಗೆ Nous : mind ಇದರ ಹಿರಿಮೆ ಹೇಳುವ ಈ ತತ್ತ್ವಜ್ಞನ, ಈ ತತ್ತ್ವವು ಭೌತವಿಶ್ವದ ಅಂಗವಾಗಿದೆ. "Nous as moving and controlling force closely bound up with the whole cosmas" (P. 64) ಎನ್ನುತ್ತಾನೆ.

ಈ ಅನ್ಯಾಕ್ಸಾಗೊರಸನಿಗೆ ಪ್ರಜ್ಞೆ: ಮನಸ್ಸು ಇದು ಶ್ರೇಷ್ಠ, ಮಿಗಿಲಾದ ಶಕ್ತಿಯುಳ್ಳದ್ದು ಎಂಬುದು ಒಪ್ಪಿಗೆ ಇದ್ದರೂ ಪ್ರಜ್ಞೆ (ಮನಸ್ಸು) ಬುದ್ಧಿ, (ಮನಸ್ಸು ಇವೆರಡರೊಳಗಿನ ಮೂಲಭೂತ ತಾರತಮ್ಯವನ್ನು ಇವನು ಲೆಕ್ಕಿಸಿಲ್ಲ!)

# ಪ್ರಕರಣ ೭

## ಪ್ರಜ್ಞೆ (ಮನಸ್ಸು) ಮತ್ತು ಬುದ್ಧಿ (ಮನಸ್ಸು) ಇವೆರಡರಲ್ಲಿ ಇರುವ ಭೇದ

### I

**ಪರಂಪರಾಗತ ಪರಿಭಾಷೆಯನ್ನು ಮರೆತು ಆಗಿರುವ ಹಾನಿ.**

ಭಾರತೀಯ ಪರಂಪರೆಯಲ್ಲಿ 'ಪ್ರಜ್ಞೆ'ಯನ್ನು ಸಂಪೂರ್ಣ ಮರೆಯಿಸಿ ಬಿಡಲಾಗಿದೆ ! ಪ್ರಜ್ಞೆಯನ್ನು 'ಸ್ಥಿತ'–ಸ್ಥಗಿತಗೊಳಿಸಿ ಪ್ರಾಣೋಪಾಸನೆಯ ಸಾಧನೆಯಿಂದ ಸಿದ್ಧಿಗಳು ದೊರೆಯುತ್ತವೆ, ಎಂಬ ಆಮಿಷವನ್ನು ಈ ದಿವ್ಯಾಧ್ಯಾತ್ಮಗಳು ಒಡ್ಡಿವೆ. 'ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠ' ಎಂಬ ಗೀತೆಯು ಪ್ರಜ್ಞೆಯ ಅಂಗವಾದ ಮನಸ್ಸನ್ನು ಅದರ ಉನ್ನತ ಸ್ಥಾನದಿಂದ ಕೆಳಕ್ಕೆ ತಳ್ಳಿದೆ. ಬುದ್ಧಿಯ ಅಂಗವಾದ ಮನಸ್ಸನ್ನು ಮಾತ್ರ ಇಂದು ಜನವು ಅರಿತಿದೆ !

ಇಂದು, ಬುದ್ಧಿಗೆ (Reason) ಇದಕ್ಕೆ ಅಗ್ರಪಟ್ಟವು ದೊರೆತಿದೆ. ಹೀಗೆ ಪರಿಭಾಷೆಯಲ್ಲಿ ಬದಲಾವಣೆಯು ಆಗುವಾಗ, ಆ ಭಾಷಿಕರಲ್ಲಿ ವೈಚಾರಿಕ ಕ್ರಾಂತಿಯು, ಸಾಮಾಜಿಕ ಸ್ಥಿತ್ಯಂತರಗಳು ಆಗಿರಲೇಬೇಕು. ಬುದ್ಧಿಯು ಪ್ರಜ್ಞೆಯ ಸ್ಥಾನವನ್ನು ಆಕ್ರಮಿಸಿದೆ' ಎಂಬ ಈ ಪ್ರಜ್ಞೆಯು ಇಂದು ತೀರ ನಷ್ಟವಾಗಿದೆ. ಭಾರತದಲ್ಲಿ ಮಾತ್ರವಲ್ಲ, ಸುಧಾರಿಸಿದವರೆಂಬ ಪಾಶ್ಚಾತ್ಯರಲ್ಲಿಯೂ ಈ ಅವಸ್ಥೆಯೆ ಇದೆ ! ಡಾ. ಐನ್ಸಟನ್ನರಂತಹ ಪ್ರಜ್ಞಾನೇತ್ರದ ಮಹಾನ್ ಶೋಧಕರ ಚರಿತ್ರೆಯಲ್ಲಿ Nous ಇದರ ಹೆಸರೂ ದೊರೆಯುವುದಿಲ್ಲ. ಇದರಿಂದಾಗಿ ಅವರ 'ದೇವರ' ಬಗೆಗಿನ ವಿಚಾರವು, ಸ್ಪಿನೊಝಾನ ರೀತಿಯಲ್ಲಿ ಸಂಕೀರ್ಣ ಸ್ವರೂಪದ್ದು ಆಗಿದೆ.

ಬುದ್ಧಿ = Reason ಇದು ತಲೆಯೆತ್ತಿದ್ದೇ ಮಾನವನ ಲೈಂಗಿಕ ಪಾತಳಿಯ 'ಜೀವಿತ' ದ ಸಂದರ್ಭದಲ್ಲಿ.

ಈ ಬುದ್ಧಿಯ ಜನನದ ಕಥೆಗಳು ಇದಕ್ಕೆ ನಿದರ್ಶನ, ದಿವ್ಯಕಥೆ'ಗಳು

ನಿಷ್ಕಾರಣವಾಗಿ ತಲೆಯೆತ್ತಿರುವುದಿಲ್ಲ. ಬುಧನು, 'ಚಂದ್ರನಿಂದ' ಹುಟ್ಟಿದವನು ಎಂದರೂ ಸಾಕಿತ್ತು. ಜಾಗತಿಕ ಪುರಾತನ ದಿವ್ಯಕಥೆಗಳಲ್ಲೆಲ್ಲ 'ಚಂದ್ರನು' ವ್ಯಭಿಚಾರದ ಅಭಿಚಾರದ ಪ್ರೇರಣಾಕೇಂದ್ರ ಎನಿಸಿದ್ದಾನೆ, ಭಾರತೀಯ ಪೂರ್ವ ಪರಂಪರೆಯಂತೆ, ಚಂದ್ರನಿಗೆ ಸ್ತ್ರೈಣನೆಂಬ ಕಾರಣದಿಂದ 'ಕ್ಷಯ' ರೋಗಿಯಾಗುವ ಶಾಪವು ದೊರೆತಿದೆಯಂತೆ. 'ಚಂದ್ರನು' ಪ್ರಾಣಲಿಂಗ ಪಾತಳಿಯ ನಿತ್ಯ ಉಭಯಲಿಂಗೀ ಪ್ರತಿಮೆ ಎಂದೂ ಬಗೆಯಲಾಗಿದೆ. ಇದು ಭೌತಸ್ಥಳ (ಕಾಲದ) ಪ್ರತಿನಿಧಿ!

ಪಾಶ್ಚಾತ್ಯ ಪರಂಪರೆಯಲ್ಲಿಯೂ ಚಂದ್ರನ ಬಗೆಗೆ ಇದ್ದ ಪರಂಪರಾಗತ ನಂಬುಗೆಗಳನ್ನು ಬಿಚ್ಚಿ ಇಡುವ ಪ್ರಯತ್ನವು ನಡೆದಿದೆ. ಈ ಗ್ರಹಿಕೆಗಳನ್ನು 'ಅಶಾಸ್ತ್ರೀಯ' ಎಂದು ಬಗೆವ ವಾಡಿಕೆಯು ಪ್ರತಿಷ್ಠಿತವಾಗಿದೆ. ಉದಾ: 'Lunacy' ಹುಚ್ಚು; 'Luna' ಎಂದರೆ ಚಂದ್ರ ಹುಚ್ಚುಹಿಡಿದು ಬುದ್ಧಿ ಭ್ರಂಶವಾಗಲು ಚಂದ್ರನೇ ಕಾರಣ ಎಂಬ ನಂಬುಗೆಯು, ಈ ಭಾಷೆಯಷ್ಟು ಪ್ರಾಚೀನ ಕಾಲದಿಂದಲೇ ಉಂಟು.

'ಬುಧ' = mercury ಈ ರೋಮನ್ ದೈವತವು; Roman God of eloquence, skill, thieving etc: ಗ್ರೀಕ್ ಪರಂಪರೆಯ 'ಹೆರ್ಮೆಸ್' 'ಬುಧ'ನ ಪರ್ಯಾಯ ಇವನು. ಝೂಸನಿಂದ ಒಬ್ಬ ಅಪ್ಸರೆಯಲ್ಲಿ ಹುಟ್ಟಿರುವನಂತೆ! ವಾದಿ ವಾಗ್ಮಿ, ಬಿರ್ಕಿ, ಕಳ್ಳ, ಚತುರ ಇಂತಹ ವಿಶೇಷಣಗಳಿರುವ ಈ ಹೆರ್ಮೆಸ್, ಹುಟ್ಟಿದ ಕೆಲವೇ ತಾಸುಗಳಲ್ಲಿ ಅಪೊಲ್ಲೊ ದೇವನ ಗೋವುಗಳನ್ನು ಕದ್ದನಂತೆ!

## III

**ಅಂತಃ ಸಂಗತಿಯುಕ್ತ ಅರ್ಥ : ನಿಯಮವು ಈ ಜೀವನ ವಿಶ್ವವನ್ನು ಆಳುತ್ತಿದೆ :** (ಬುದ್ಧಿಯು ರಾತ್ರಸಮಯ ನಿರ್ಮಾಣಶಕ್ತಿಯಾಗಿದೆ) ಬುಧನು ಚಂದ್ರನ ಸಂತಾನ; ಬುದ್ಧಿಯು; 'Luna' ಚಂದ್ರನ ಪಾತಳಿ. ಇದು ನಿಜವಿದ್ದರೆ, ಈ ಬುದ್ಧಿಯು ರಾತ್ರ ಸಮಯಾಚಾರಗಳ ಸಂದರ್ಭದಿಂದಲೇ ಹುಟ್ಟಿ ಬೆಳೆದಿರಲಿಕ್ಕೆಬೇಕು. ಇದಕ್ಕೂ ಮುಂಚಿನ ಪ್ರಕರಣದಲ್ಲಿ, ಭಾರತೀಯ ಸಂಪ್ರದಾಯದಲ್ಲಿ, ಬುದ್ಧಿಯು ಅವತರಿಸಿರುವ ಹಿನ್ನೆಲೆಯ ವಿವರಣೆಯು

ಸ್ವಲ್ಪ ಬಂದಿದೆ. ಅದರಲ್ಲಿ 'ಆಪ ಏವ ಅಗ್ರೇ ಮಹತ್ ಸಲಿಲಂ ಆಸೀತ್' ಎಂಬ ಉಲ್ಲೇಖ ಬಂದಿದೆ.

ಈ 'ನೀರು'=ಸಲಿಲ (ಶರೀರ=ಲಿಂಗ) ಇದು ಸೃಜನ ಜಲ; ಸೃಜನ ಕ್ರಿಯೆಯ ಆಧಾರಭೂತ 'ಸಮಯ' ಪರಿಸರವು, ರಾತ್ರಿಯ ಕಾಲವೇ ಪ್ರಾಧಾನ್ಯದಿಂದ ಇರುವುದು ಉಂಟಷ್ಟೆ ? ಇನ್ನೂ ಸಂದೇಹವಿದ್ದರೆ, ಈ ಲೈಂಗಿಕ ವ್ಯವಹಾರವು ಹಗಲೂ ನಡೆಯುತ್ತದಲ್ಲ ಎಂಬ ಆಕ್ಷೇಪನಿದ್ದರೆ ನರ (ಳ) ಸಂಪ್ರದಾಯದ ಋಗ್ವೇದದೊಳಗಿನ ಈ ವರ್ಣನೆಯನ್ನು ನೋಡಿಕೊಳ್ಳಿ. ಸೃಷ್ಟಿ ನಿರ್ಮಾಣಕ್ಕೆ ಸಂಬಂಧಿಸಿದ ಸೂಕ್ತವಿದು.

'ತಮಃಆಸೀತ್ ತಮಸಾ ಗೂಹ್ಯಂ ಅಪ್ರಕೇತಂ'
ಸಲಿಲಂ ಆಹಾ ! ಇದಂ ಸರ್ವಂ || (x. ೧೨೯. ೩)

ಕತ್ತಲು (ತಮಃ) ಕತ್ತಲಿನಿಂದ (ತಮಸಾ) ಆ–ಲಿಂಗಿತವಿದೆ. ಆ ಗೂಢ (ಸಮಯ)ದಲ್ಲಿ ಒಂದು ಕಿರಣವೂ ಒಳಸೇರಲಾರದು; (ಅಪ್ರಕೇತಂ); ಈ ಋಗ್ವಾಕ್ಯದೊಳಗಿನ ಗೂಢ ಭಾಷೆಯು ಅಭ್ಯಸನೀಯವಿದೆ. ತಮಃ (ಕತ್ತಲು) ತಮಸಾ ಕತ್ತಲಿನಿಂದ ಆಲಿಂಗಿತವಿದೆ ಎಂದರೇನು ?

'ಕಾಮಾತುರಾಣಾಂ ನ ಭಯಂ ನ ಲಜ್ಜಾ' ಈ ಮಾತು ಅಕ್ಷರಶಃ ನಿಜ. ಲೈಂಗಿಕ ಪ್ರಚೋದನೆಯಿಂದ ಪ್ರಜ್ಞಾಯುಕ್ತ ಮನಸ್ಸು ಕುರುಡು ಆಗುತ್ತದೆ! ಕಾಮದ ಮದವೇರಿ ಸ್ಥಳ–ಕಾಲದ ಅರಿವು ಉಳಿಯುವುದಿಲ್ಲ; ಮೈಮೇಲಣ ಎಚ್ಚರು ಇಲ್ಲವಾಗುವ ಈ ಅವಸ್ಥೆಯನ್ನು ಸಾಕ್ಷಾತ್ 'ಕತ್ತಲು' ಎಂದಿದ್ದಾರೆ. ಇದು'ರಾತ್ರಿ'ಯ ಅವತಾರವೇ ಆಗುತ್ತದೆ, ಎಂದು ಈಕವಿಯ ಆಶಯ.ಕಾಮದ ಉನ್ಮಾದದ ವ್ಯಕ್ತಿ ಹೆಣ್ಣಿರಲಿ, ಗಣ್ಣಿರಲಿ ಅದನ್ನು 'ತಮಃ' ಎಂದಿದ್ದಾನೆ. ಋಗ್ವೇದದ ಕವಿ.

ಅಲ್ಲದೆ, ಎಂತಹ ಪ್ರಾಜ್ಞರಿದ್ದರೂ ಹೆಂ–ಗಂ ಒಬ್ಬರೊಬ್ಬರ ಆ–ಲಿಂಗನ ದಲ್ಲಿ, ಮೈ ಮರೆಯಲು ಅಸಮರ್ಥರಾದರೆ, ಈ ಕ್ರೀಡೆಯಲ್ಲಿ ಕಾಮತೃಪ್ತಿಯ ಆ ರಸನಿಮಿಷದ 'ಮುಕ್ತಿಯ' ಮಹೋನ್ನತ ಅನುಭವಕ್ಕೆ ಎರವಾಗಬೇಕಾಗು ತ್ತದೆ. 'ಭಗ'ವತ್ ಗೀತೆಯ 'ಭಗ'ವಂತನು ಹೇಳುವ ನಿಷ್–ಕಾಮ (Passionless) ಕರ್ಮದ' ಚಟವು ಅಂಟಿದರೆ ಕಾಮಕೇಳಿಯ ನೈಸರ್ಗಿಕ ಆಕರ್ಷಣ ಆನಂದವು, ಅಲ್ಲಿ ಅಭಾವದಿಂದಲೇ ಎದ್ದು ಕಾಣುವ, ಈ ಕರ್ಮವು ವ್ಯಭಿಚಾರ ಕ್ರಿಯೆಯಾಗಿ ಪರಿಣಮಿಸದಿರದು. ಆಮರಣ ಕುಮಾರಿ ಕುಮಾರ

ರಾಗಿ ಬಾಳುವ ಸಂಪ್ರದಾಯದ ಕಟ್ಟಿಗೆ ಕೊರಳು ಕೊಟ್ಟವರಿಗೆ ಈ ನರ(ಳ) ಸಂಪ್ರದಾಯಗಳು, ಲೈಂಗಿಕ ವ್ಯವಹಾರವು ಮೈಮೇಲೆ ಬರದೆ ಇರುವ ಇಂಥ ಹಂಚಿಕೆಗಳನ್ನು ಕಲ್ಪಿಸಿದ್ದು ಉಂಟು. 'ಅಸಂಗ ಶಸ್ತ್ರ ಧರಿಸಿ ಎಂದರೆ ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ ಆಗಿದ್ದು ಉಂಟು. ಗುಣಾ ಗುಣೇಷು ವರ್ತಂತೇ (ಆ ಗುಣಕ್ಕೂ ಈ ಗುಣಕ್ಕೂ ಸಾಟಿ) "ಈ ವಾ–ನರ" (ಅಂಗ) ನಾನು ಅಲ್ಲ ಎಂಬ ನಿರ್ಲಿಪ್ತ ತಟಸ್ಥಭಾವದ ಸಾಧನೆಯನ್ನು ಈ ದಿವ್ಯಾಧ್ಯಾತ್ಮಗಳು ಹೇಳಿವೆ !

ಈ 'ಬುದ್ಧಿ' 'ಪರಿಸ್ಥಿತಿಜನ್ಯ,' ತುರ್ತುಪರಿಸ್ಥಿತಿಯೊಳಗಿಂದ ಪಾರಾಗಲು ಮಾರ್ಗದರ್ಶಕವಾಗಿ ಅವತರಿಸಿರುವ ಈ ಬುಧ, ಬುದ್ಧರ 'ಬುದ್ಧಿ'ಯ ಚಾಕ ಚಕ್ಯವು ಇದು.

'ಮಹತ್ ಸಲಿಲ' ಇದು 'ಬುದ್ಧಿ ಜಲ' ಇದೂ ರಾತ್ರಿಯ ಜಲವೇ. ಈ ಮಹತ್=ಬುದ್ಧಿಯು ಪ್ರಭಾವಕಾರಿಯಾಗುವ ಯುಗವು, ಪ್ರಜ್ಞಾ ಪ್ರಕಾಶ=ಅರ್ಥ : ವಿಚಾರದ ಅಭಾವದಿಂದಾಗಿ ಕತ್ತಲೆಯ ಯುಗವಾಗಿ ಪರಿ ಣಮಿಸದಿದ್ದರೇ ಸೋಜಿಗ.

ಮಹ, ಮಹತ್ ಎಂಬುದು ಬುದ್ಧಿಯ ಪರ್ಯಾಯ ಶಬ್ದ.ಇದರ ವಿವರಣೆ ಈಗ ಬೇಡ. ಗ್ರೀಕ ಸಂಸ್ಕೃತಿಯ ಸಂದರ್ಭದಲ್ಲಿ Reason, Intelligence ಇವು ಮೈವೆತ್ತಿ ಬೆಳೆದ ವಿಚಾರದ ವಿವರಣೆ ಇಲ್ಲಿ ಅವಶ್ಯವೆನಿಸುತ್ತಿದೆ.

IV

ತಂದೆಯಾದ ಝೂಉಸನ 'ತಲೆ' ಯಿಂದ ಹುಟ್ಟಿದಳು ಎಂಬ 'ಅಥೆನಾ' ಮಿಲ್ಟನ್ ಹೇಳುವಂತೆ, ಪಾಪವು ಭೂಮಿಗೆ ಅವತರಿಸಿದ್ದನ್ನು ಸೂಚಿ ಸುವ ಸಾಂಕೇತಿಕ ಪ್ರತಿಮೆ ಇದು. ಇಲ್ಲಿ, ಸ್ತ್ರೀ' ವ್ಯಾಪಿಅಲ್ಲ; 'ಬುದ್ಧಿ' ಪಾಪ ಪ್ರೇರಕಶಕ್ತಿ. ಈ ಅಥೆನಾ ಬುದ್ಧಿಯ ದೇವಿ.

'Secrcy is sin' ಎಂದು ಮಹಾತ್ಮಾಜೀ ಆಡಿದ್ದು 'dramatic irony' ಆಗಿದೆ. ಗಾಂಧಿಜೀಯವರು 'ಭಗ'ವತ್ ಗೀತೆಯ ಭಕ್ತರು! ಗೀತೆಯೇ ಹೇಳುತ್ತದೆ : ಈ 'ಗುಹ್ಯಾತ್' ಗುಹ್ಯತಮಂ ಶಾಸ್ತ್ರಂ' ಇದನ್ನು ವ್ಯಾಸ ಹೇಳಿದ್ದಾನೆ ! ಈ ಗೀತೆಯಲ್ಲಿ 'ಬುದ್ಧಿಯೋಗ' ಉಂಟು, ಎಂದು 'ಭಗ' ವಂತನೇ ಕಬೂಲ ಮಾಡಿದ್ದಾನೆ ! 'ಕೃಷ್ಣಕಾರಸ್ಥಾನೀ' 'ಕಪಟನಾಟಕಸೂತ್ರ

ಥಾರಿ' ಎಂದು Pub lice conscienc= ಸಮಾಜ ಸಮುಷ್ಟಿಯು ಹೇಳುವ ಮಾತಿದು ! ಈ ಅಂತಃಸಂಗತಿಯು ಈ ಮೊದಲು ಹೇಳಿರುವ ವಿಶ್ವನಿಯ ಮನ್ನು ದೃಢಪಡಿಸುತ್ತದೆ.

ಪಾಪೀಶಕ್ತಿ=ಬುದ್ಧಿದೇವಿ, 'ಝೀಊಸನ ತಲೆಯಿಂದ' ಹುಟ್ಟಿದವಳು ಎಂಬಲ್ಲಿ ಸುಳ್ಳು=ಕಣ್ಣಟ್ಟು ಇದೆ. ಲೈಂಗಿಕ ಪಾತಳಿಯ ಮೇಲೆ ಬರುವ 'ಸೂರ್ಯನು ಆದಿತ್ಯ (ಲಿಂಗ) ಶಕ್ತಿ ಆಗುತ್ತಾನೆ. ಪ್ರಕಾಶತತ್ತ್ವದ ಝೀಊಸನೂ, ಗ್ರೀಕ ಆದಿತ್ಯನಾಗಿದ್ದಾನೆ ! ಪಾಪ ಮುಚ್ಚಿಕೊಳ್ಳಲು ಈ ಸುಳ್ಳುತಾನೆ? 'Secrecy is sin' ಈ ಕಾರಣವೇ ಇರಬೇಕು. 'ಅಥೆನಾ' 'ಪಾಪಿ' ಎನ್ನಲು ಋಗ್ವೇದದಲ್ಲಿ ವಾಗಾಂ ಭೃಣೀ ಕೃತ್ಯಾ; ಪಾಪೀ ಶಕ್ತಿ. 'ಬ್ರಹ್ಮದ್ವಿಕ್ಷೇ ಹಂತವೈ ಶರವೇ ರುದ್ರಾಯ ಧನುಃ ಆತನೋಮಿ' ಎಂಬ ಈ ಬುದ್ಧೀ ದೇವಿ, ವಿಶ್ವಾಮಿತ್ರನ 'ಪ್ರಜ್ಞಾ' ರೂಪ ಬ್ರಹ್ಮನ 'ಸವಿತೃ'=ಧೀಶಕ್ತಿಯ ನಾಶಕ್ಕೆ ಸಿದ್ಧಳಾಗಿದ್ದಾಳೆ !

ಗ್ರೀಕ ಸಂಸ್ಕೃತಿಗೆ, ಝೆಲ್ಲರ್ ಹೇಳುವಂತೆ ಹೊಸ ತಿರುವು ಕೊಟ್ಟ ಪ್ಯಾಥ್ಯಾಗೋರಾಸನು, ಅಲ್ಲಿಯ 'ಗುಹ್ಯ ಮಾರ್ಗದ ಸಾಧಕರ ಕೂಟಗಳನ್ನು ಸ್ಥಾಪಿಸಿದ್ದಾಗಿ, ಇತಿಹಾಸ ಹೇಳುತ್ತದೆ. ಗುರು ಪ್ಲೇಟೋ, ಪ್ಯಾಥ್ಯಾಗೊರಾಸನ ಪಂಥದ ಪ್ರಭಾವಕ್ಕೆ ಒಳಗಾಗಿ, 'Reason' ಉಪಾಸಕನಾಗುತ್ತಾನೆ. 'Geometer' ಇವನ ದೇವರು ಆಗುತ್ತದೆ.

ಆದರೆ ಶಿಷ್ಯ ಅರಿಸ್ಟೋಟ್ಲನು ಪೈಥ್ಯಾಗೋರಸನ ಪಂಥದ ಪ್ರಭಾವ ದಿಂದ ದೂರ ಉಳಿದದ್ದೇಕೆ ? ಅರಿಸ್ಟೋಟ್ಲನಿಗೆ ಗ್ರೀಕ ಸಂಸ್ಕೃತಿಯ ಸಮಾಲೋಚನೆಯಲ್ಲಿ ಈ ಪ್ಯಾಥ್ಯಾಗೋರಸನು 'ಬುದ್ಧಿವಂತ' ಸಾಕ್ಷಾತ್ Reason ದ ಮೂರ್ತಿ ಎಂದು ಖಾತ್ರಿಯಾಗಿರಬೇಕು. 'ಇಲ್ಲದೆ ಇದ್ದುದ್ದನ್ನು ಇದೆ, 'ಉಂಟು' ಎಂದು ನಂಬಿಸಿರುವ ಮಾಟಗಾರನು, ಈ ಪೈಥ್ಯಾಗೊರಾಸ ಎಂದು ಆತನು ಕಂಡುಕೊಂಡಿದ್ದನು.

ಈ ಭೌತ 'ಸ್ಥಳ' (ಕಾಲ) ರೂಪ ಈ ತತ್ತ್ವವು ಅಭಾವಾತ್ಮಕ ವಿದೆ. ಕಂನಾಡ ಪ್ರಾಜ್ಞರು ಇದನ್ನು 'ಬಯಲು' ಎಂದದ್ದು ನಿಷ್ಕಾರಣ ವಲ್ಲ. ಈ ಪೈಥ್ಯಾಗೊರಾಸನೇ, Void, Vacuum ಈ ಪದಗಳಿಂದ ಸೂಚಿಸಿದ್ದು ಈ 'ಬಯಲು'='ನಿರ್ವಯಲನ್ನೇ !

ಆದರೂ ಈ ಸ್ಥಳ(ಕಾಲ)ವನ್ನು ಉಂಟು ಎಂದು ನಂಬಿಸಲು Non existant planet ಒಂದನ್ನು ಕಲ್ಪಿಸಿದ್ದಾನೆ! ಉಂಟು ಎಂದು ನಂಬಿಸಿದ್ದಾನೆ! ಈ ಅಂಶವು ಬೆಳಕಿಗೆ ಬಂದದ್ದು ಅರಿಸ್ಟೊಟ್ಲನ ಸಾಂಸ್ಕೃತಿಕ ಸಮೀಕ್ಷೆಯಲ್ಲಿ. ಈತನು ಹೀಗೆ ಯಾತಕ್ಕಾಗಿ ಈ ಸುಳ್ಳನ್ನು ನಂಬಿಸಿದ್ದು ? 'To make up the total to the sacred number 'Ten'! ಈ 'ದಶ' 'ಹತ್ತು' ಮೇಲೆ ಹತ್ತಿ ಕೂಡುವ ಸಂಖ್ಯೆ ಇದು='ಅತ್ಯತಿಷ್ಠತ್' ಎಂದು ವೇದ ಹೇಳಿದೆ! ಅತ್ಯತಿಷ್ಠತ್ ದಶಾಂಗುಲಂ ಈ ಸೃಷ್ಟಿಕರ್ತಪುರುಷ ! ಗುಹೆಯ ಈಶ್ವರ !

ಭಾರತೀಯ ದಿವ್ಯಾಧ್ಯಾತ್ಮ ಪಂಥವು 'ಆದಿತ್ಯ' ಹೆಸರಿನಿಂದ, ಅಂತರಿಕ್ಷದಲ್ಲಿ ಕಲ್ಪಿಸಿರುವ ಹಾಗೂ ಪ್ಯಾಥ್ಯಾಗೊರಾಸ ಪಂಥೀಯರು 'One (1) God' ಎಂದು ನಂಬಿಸಿರುವ ಈ ನಿತ್ಯ 'ಚರಲಿಂಗ'ವು ಇದು ! ಇದು ಭೂಮಿಯ ಮೇಲಣ Fathers: ಜಂಗಮ ದಿವ್ಯಾಧ್ಯಾತ್ಮ ಉಪದೇಶಕರ ಪ್ರೇರಣಾಕೇಂದ್ರವು. ಈ One (ಆದಿತ್ಯ) ಇದಕ್ಕೆ ಪ್ರತಿಯಾಗಿ 'Counter Earth' ಕಲ್ಪಿಸಲಾಗಿದೆ. 'ಪ್ರತಿಭೂಮಿ' ಎಂಬುದು ಸುಳ್ಳು ಹೆಸರು. Counter earth ಎಂಬಲ್ಲಿ Moon=ಚಂದ್ರ ಎಂಬ ಗುಹ್ಯಾರ್ಥವು ಉಂಟು ಎಂದು ಆ ಸಂಪ್ರದಾಯವೇ ಹೇಳುತ್ತದೆ.

ಪ್ಯಾಥ್ಯಾಗೊರಸನು ಪ್ರತಿಷ್ಠಿಸಿರುವ ಗುಹ್ಯಮಾರ್ಗವು ರಾತ್ರ ಸಮಯಾಚಾರಗಳ ಹಿನ್ನೆಲೆಯಲ್ಲಿ ಬೆಳೆದದ್ದು ಎಂಬ ಸಂಗತಿಯನ್ನು ಬಾಯ್ಬಿಟ್ಟು ಒಪ್ಪಿಕೊಳ್ಳಲಾಗುತ್ತಿಲ್ಲ. ಆದರೂ, (Counter Earth) ಚಂದ್ರಾ ಇಲ್ಲೆ ಇದ್ದಾಳೆ, ಈ ಒಂದು ಸಾಂಕೇತಿಕ ಪ್ರತಿಮೆಯೂ ಸಾಕು, ಸತ್ಯವು ಬಯಲಿಗೇ ಬರಲು. ಪಾಶ್ಚಾತ್ಯ ಪರಂಪರೆಯಲ್ಲಿ Moon ಇದು ನಿತ್ಯ ಸ್ತ್ರೀಲಿಂಗಿ. She Moon ಎಂಬ ವಾಡಿಕೆ ಇಂದಿಗೂ ಇದೆ.

## V

## ಬುದ್ಧಿ ಮಹಾ (ಮತ್ತು) ಚಂದ್ರಾ ಬೇರೆಯಲ್ಲ

ತೈತ್ತಿರೀಯ ಉಪನಿಷತ್ತು ಹೇಳುತ್ತದೆ: 'ಮಹಃ ಇತಿ ಚಂದ್ರಮಾಃ' 'ಮಹಃ ಇತಿ ಆದಿತ್ಯಃ' (೧.೫). ಇಜಿಪ್ತಿನಲ್ಲಿಯೂ ಚಂದ್ರೋಪಾಸನೆಯು ಇತ್ತು. ಥೋತ್ (Thoth) ಚಂದ್ರನು ಅಥವಾ Baboon. ಕಪಿಯು

ತಲೆಯ ಮೇಲೆ ಚಂದ್ರನ ಸಂಕೇತ ತೋರಿಸಲಾಗುತ್ತದೆ. (Ancient Egyption Religion, By H. Franfort, 1848, p. 10) ಪ್ರಪಂಚದಲ್ಲಿಯೇ ಅತೀ ಪ್ರಾಚಿನ ಚಂದ್ರನ ಗುಡಿ ಊರ ಅಸ್ಸೀರಿಯಾ ಸುಮೇರ ಭಾಗದಲ್ಲಿದೆ, ಜಾದು ಮಾಟದ ಮೂಲಸ್ಥಾನ ಪ್ರಪಂಚದಲ್ಲಿ.

ಪೈಥ್ಯಾಗೊರಾಸನು, ಸಾಧಕರು ತಮ್ಮ ದೇಹವನ್ನು 'ಪಿರಾಮಿಡ್' ಎಂದು ಬಗೆಯಬೇಕಾಗಿ ಆಜ್ಞಾಪಿಸಿದ್ದಾನೆ. ದಶಾಂಗುಲ ಪುರುಷನ ಸಮಾಧಿ ಈ ಪಿರಾಮಿಡ್. ಈ ಪಾರಿಭಾಷಿಕ ಪದವು ಒಂದೇ ಸಾಕು ಇಜಿಪ್ತನ ಪ್ರಭಾವ ಸೂಚಿಸಲು.

* * *

ಪರ್ಮೆನೈಡಸ (Parmenides ಕ್ರಿ. ಪೂ. ೫೪೦–೪೭೦) ಈತನು ಪ್ಯಾಥ್ಯಾಗೊರಾಸ ಪಂಥದ ಪ್ರಭಾವಕ್ಕೆ ಒಳಗಾದ ಮಹಾನ್ ತತ್ವಜ್ಞನೆಂದು ಖ್ಯಾತಿಯಿದೆ. ಇವನು 'ಚಂದ್ರಾ' ಉಪಾಸಕನೇ ಇದ್ದನೆಂಬ ನಿರ್ದೇಶವಿಲ್ಲ. ಆದರೆ ಈತನು, 'ರಥದಲ್ಲಿ' ಕುಳಿತು 'ದೇವಿಯ' ಕಡೆಗೆ ಹೊರಟಿರುವಂತೆ ಇವನ ಕವನವು ಪ್ರಾರಂಭವಾಗುತ್ತದೆ. ಈ ದೇವಿಯಿಂದ ಈತನಿಗೆ ಸತ್ಯ (truth) ದರ್ಶನವಾಗುತ್ತದೆ (reveals).

ಈ ಪರ್ಮೆನೈಡಸನು, ಹಿರಾಕ್ಲಿಟಸ (ಕ್ರಿ.ಶ. ೫೪೪–೬೪೪) ವಿರೋಧಿ. ಪರ್ಮೆನೈಡಸನು ಬಯಲನ್ನು (ಸ್ಥಳ) 'ಎಂಬ Being ಸಂಕೇತದಿಂದ ಆರಾಧಿಸುತ್ತಾನೆ. 'ಬಯಲು' (ಸ್ಥಳ) ಇದು Reing ಆಗುವಾಗ, ನಿರ್ವಯಲು (ಕಾಲ) ಅದು 'Not Being' ಆಗಲೇಬೇಕು. ಹಿರಾಕ್ಲಿಟಸನು 'ಕಾಲ' ತತ್ತ್ವದ ಉಪಾಸಕನು. ಆದರೆ ಇದನ್ನು 'Not Being' ಎಂಬ ಪದದಿಂದ ಸೂಚಿಸಿ, ಹಿರಾಕ್ಲಿಟಸನನ್ನು ಗೇಲಿಮಾಡಿದ್ದಾನೆ.

ಆದರೆ ಪರ್ಮೆನೈಡಸನ ಗತ್ತುಗಾರಿಕೆಯೂ, ಸೂಕ್ಷ್ಮವಾಗಿ ವಿಚಾರಿಸಿದರೆ, ಇಲ್ಲಿ ಹೊರಗೆ ಬರುತ್ತದೆ. ಈತನು ಬಯಲ (ಸ್ಥಳ)ದ ಭಕ್ತನಾಗಿದ್ದರೂ ವ್ಯಕ್ತಿ ನಿರಪೇಕ್ಷ 'ಬಯಲು' (ಸ್ಥಳ) ಇವನಿಗೆ ಮಾನ್ಯವಿದ್ದಿಲ್ಲ! ಸಾಕಾರ ಸಗುಣ ಮೂರ್ತಿಯ [೦] ಭಕ್ತನಿರಬೇಕು, ಎಂದು ಅವನ ಮಾತಿನಿಂದಲೇ ಧ್ವನಿತವಾಗುತ್ತಿದೆ.

"He understood by Being not the abstract concept of pure Being; but the "full" the space-filling mass, without any further specifications"

ವ್ಯಕ್ತಿನಿರಪೇಕ್ಷ ಬಯಲು ಬರಿದೋ ಬರಿದು [o] ಟೊಳ್ಳು. ಆದರೆ ವ್ಯಕ್ತಿ ಸಾಪೇಕ್ಷ ಬಯಲು [o] ಇದನ್ನು ವೇದವು 'ಅಮೃತಸ್ಯ' ನಾಭಿ: ಎಂದಿದೆ; ಈ 'ಚಂದ್ರಾ' ಭೂಮಿಯ ಮೇಲಣ 'ಕುಮಾರೀ' ದೇವಿಯೆ [o] ಆಗುತ್ತಾಳೆ; ಮತ್ತು ಇದು 'full' ಇರಬೇಕು. ಜಾಬಾಲೋಪನಿಷತ್ತಿನ ಭಾಷೆಯಲ್ಲಿ 'ಅವಿಮುಕ್ತ ಕುರುಕ್ಷೇತ್ರ'ವು ಇರಬೇಕು; ನರ (ಳ) ನ ಕಾದಾಟಕ್ಕೆ.

## VI

ಪ್ಯಾಥ್ಯಾಗೊರಾಸ. ಪರ್ಮೆನೈಡಸ ಇವರು ಯೋಜಿಸುವ ಪರಿಭಾಷೆಯು ನೇರ ಅರ್ಥಕ್ಕೆ ನಿಲುಕುವುದಿಲ್ಲ. ಇದು ಎಲ್ಲ ದೇಶಗಳ ದಿವ್ಯಾಧ್ಯಾತ್ಮಗಳ ವೈಶಿಷ್ಟ್ಯವೇ ಆಗಿದೆ. ಆದರೆ ಹೀಗೆ 'ಕಣ್ಣು ಮುಚ್ಚಾಲೆಯ ಆಟ' 'ಮುಸುಕಿನ ಮಾತು' ಯಾಕೆ ? ಎಂಬ ಈ ಸಂದೇಹವನ್ನು, ಅರಿಸ್ಟೊಟಲ್ಲನ ಸೂತ್ರವು ಪರಿಹರಿಸುತ್ತದೆ. "Form is immanent in things...." ಆಕೃತಿಯು ಆದರ ಆಶಯ ಗುಣದಲ್ಲಿಯೇ ಹುದುಗಿರುತ್ತದೆ. ಆಂತರಿಕ 'ಗುಣ' (Cause)ಇದೇ ಅದರ ಆಕೃತಿಗೆ ಕಾರಣವಾಗುತ್ತದೆ.

ಈ ಪ್ರಾಣಲಿಂಗ ಚೇತಸದ ಪಾತಳಿಯು, ನಿತ್ಯ ಕತ್ತಲಲ್ಲೇ ಇರುವ ವಿಶ್ವ ನಿಯಮವನ್ನು ಮೀರಲಾರದು. ಆದಕಾರಣ ಜೈನ ಮುನಿಗಳ 'ಶೋಭಾ' (?) ಯಾತ್ರೆಯ ಮೆರವಣಿಗೆಗೆ ಬಂದವರು, ಈ 'ಬ್ರಹ್ಮ ಸಾಕ್ಷಾತ್ಕಾರ'ವಾಗುವ ಸಂಧಿಯನ್ನು ಕಳೆದುಕೊಳ್ಳುವುದು ಸುಳ್ಳಲ್ಲ. 'ಆಕರ್ಷಣವನ್ನು ಹೆಚ್ಚಿಸಲು' ಬಟ್ಟೆಧರಿಸುವ ವಾಡಿಕೆಯು ಉಂಟಾಗಿದೆ, ಎಂಬ ಬುದ್ಧಿವಂತರೂ ಇದ್ದಾರೆ. ಬಟ್ಟೆ ಕಳಚಿದಾಗ, ಪ್ರಜ್ಞೆ ಬಧಿರವಾಗಿ ಏನೂ ಕಾಣದಾಗುತ್ತದೆ !

ಇದು ಹಾಗಿರಲಿ, ಗ್ರೀಕ ತತ್ತ್ವಮೂಲಕವೂ ಕನ್ನಾಡ ಪ್ರಾಜ್ಞರು ಯೋಜಿಸಿರುವ 'ಬಯಲು' (void) ಈ ಪಾರಿಭಾಷಿಕ ಪದದ ಔಚಿತ್ಯವೇ ದೃಢಪಡುತ್ತಿದೆ ! ಇದರೊಡನೆ ಇನ್ನೂ ಒಂದು ಮಹತ್ತ್ವದ ಸಂಗತಿಯು ಈ

ಬೆಳಕಿನಲ್ಲಿ ಬರುತ್ತಿದೆ. ಬುದ್ಧಿ ಹಾಗೂ ಪ್ರಜ್ಞೆ ಇವೆರಡರಲ್ಲಿ ಮೌಲಿಕ ಭೇದವಿದೆ. ಪ್ರಜ್ಞೆ ಜೀವನ ಪ್ರಚೋದಕ; ಬುದ್ಧಿ ಜೀವಿತದ ಅಸ್ತಿತ್ವಕ್ಕೆ ಆಧಾರ.

ಪ್ರಜ್ಞೆಯು, ಈ ಭೌತ ಸ್ಥಳ-ಕಾಲವನ್ನು, ಅಭಾವವೇ, [೦] ಸ್ಥಾಯಿ ರೂಪದ್ದು ಇರುವುದಾಗಿ ಹೇಳುತ್ತದೆ. ಇದುವೆ ವಸ್ತುಸ್ಥಿತಿ, ಎಂಬುದನ್ನು ಕಂನಾಡವರ ಪ್ರಜ್ಞಾ ನೇತ್ರವು ರೂಪಿಸಿರುವ 'ಬಯಲು' ಈ ಪಾರಿಭಾಷಿಕ ಪದವು ದೃಢಪಡಿಸುತ್ತದೆ ಆದರೆ ಗ್ರೀಕ ಪ್ಯಾಥ್ಯಾಗೊರಸನು ಇದನ್ನು Void; vaccum ಎಂದು ಅರಿತೂ, ಜನವು ಇದು 'ಉಂಟು' 'ಇದು ಮಾತ್ರ ಉಂಟು' ಎಂಬ ಸಂಭ್ರಮಕ್ಕೆ ಒಳಗಾಗುವ ದಾರಿಗೆ, ತಳ್ಳುವ ಹಂಚಿಕೆಯನ್ನು ಮಾಡಿದ್ದಾನೆ! ಆ ಸಂಪ್ರ ಸಂಪ್ರದಾಯದ ಪರ್ಮೆ ನೈಡಸನೇ ಇದಕ್ಕೆ ಸಾಕ್ಷಿ. ಇದು ಬುದ್ಧಿಯ ಯುಗಾರಂಭ.

## VII

ಪಾಶ್ಚಾತ್ಯ ಪರಂಪರೆಯಲ್ಲಿ ವ್ಯಕ್ತಿ ಸಾಪೇಕ್ಷ ಬಯಲನ್ನು Being ರೂಪದಲ್ಲಿ ನೆಚ್ಚಿದ್ದಾರೆ. ಕುಮಾರಿ ಮೇರಿ Virgin ಇದ್ದಾಳೆ. ಹೀಗೆ, ಬಯಲು = ಸ್ಥಳ [೦] ಕಣ್ ಮಾತ್ರ ಉಂಟು. ನಿರ್ವಯಲು ಕಾಲ= ಪುರುಷ ಗಣ್ (Not Being) ಇಲ್ಲ! ಅಲ್ಲ; ಆದಿತ್ಯ, ಹ.ಟ್ಟಿ ಅಂತ್ಯ ವಾಗುತ್ತದೆ. ಶಿಲುಬೆಗೆ ನೇತಾಡುತ್ತಾನೆ' ಈ ಪುರಿಶಯ ಪುರುಷ! ಇದು ಬುದ್ಧಿಯ 'ಶಿಲ್ಪ'! 'ಉಂಟು,' 'ಇಲ್ಲ' ಎರಡನ್ನೂ ಹೇಳುವ ಸ್ವಭಾವ ಈ ಬುದ್ಧಿಯದು! ಪ್ರಜ್ಞಾ ಪ್ರಕಾಶದಲ್ಲಿ ವಾಸ್ತವ: ಸತ್ಯವು ನೇರ ಕಾಣುತ್ತದೆ.

ಇನ್ನು, ಈ ಬುದ್ಧಿ ವೈಭವದ ಮಾದರಿ ನೋಡಿ. ಪರ್ಮೆನೈಡಸ್, ಹಿರಾಕ್ಲಿಟ ಈ ಆದ್ಯರ ವಚನಗಳ ಮೂಲಕ ಈ 'ಬುದ್ಧಿ' ಸ್ವಲ್ಪ ಅರಿಕೆಗೆ ಬರಲಿದೆ. ಕಾಲ (ಗಣ್) ಉಪಾಸಕ ಹಿರಾಕ್ಲಿಟನನ್ನು ನಗೆಗೆ ಈಡು ಮಾಡಲು, ಆತನು 'Not Being' ನಿರ್ವಯಲ ಉಪಾಸಕನು ಎಂದು ಹೇಳಿ ಪರ್ಮೆನೈಡಸ ನಕ್ಕಿದ್ದಾನೆ. ಈತನು ತನ್ನ ಪಕ್ಷವನ್ನು ಚೆಂದಗಾಣಿಸಿ ಹೇಳುವ ಈ ಬೌದ್ಧಿಕ ಚಾಕಚಕ್ಯವು, ಬರ್ಟ್ರಾಂಡ ರಸೆಲ್ಲರಿಗೆ ತುಂಬ ಹಿಡಿಸಿದೆ!

Thought is not different from Being; for it is only thought of Being. The only perception which is true is that which shows us in everything an unchanging **Being, namely Reason!**

ಸ್ಥಲ: ಬಯಲು: ಕಣ್ [೦] (Being), ಮತ್ತು ಬುದ್ಧಿ ಬೇರೆಯಲ್ಲ! ಇದನ್ನು ಗ್ರೀಕ ದಿವ್ಯಾಧ್ಯಾತ್ಮ ಪಂಥವು ಮಾತ್ರ ಹೇಳುತ್ತದೆ, ಎಂದಲ್ಲ. ನಮ್ಮ ವೇದೋಪನಿಷತ್ತಿನ 'ಚಕ್ಷುಃ ವೈ ಸತ್‌ತ್ಯಂ' ಎಂಬ ಈ ಸಾಕ್ಷಾತ್ಕಾರ: ದರ್ಶನವು ಪರ್ಮೆನೈಡಸನ 'ಅನುಭಾವ'ಕ್ಕಿಂತ ಭಿನ್ನವಿಲ್ಲ !

ಕಣ್=ಚಕ್ಷುಃ, 'ಭಗ'ವತ್ ಗೀತೆಯು ವರ್ಣಿಸಿರುವ 'ದಿವ್ಯಚಕ್ಷು' ಇವೆರಡೂ ಸಮಾನವೇ ಇವೆ. ವೇದದ 'ದಿವೀವ ಚಕ್ಷುಃ ಆತತಃ' ಹಿಗ್ಗಿ ಅಗಲವಾಗಿ ಇರುವ ದಿವ್ಯಲೋಕದಂತಹ ಚಕ್ಷುವಿನ ಕಣ್ಣ ನೆನಪನ್ನು ತಂದು ಕೊಡುವ ಭೂಮಿಯ ಮೇಲಣ ಈ ಕಣ್ [೦] ಎಂದರೆ Reason=ಬುದ್ಧಿ ಜೀವಿ ಅಥವಾ ಸರಸ್ವತಿ, ಆಂಭೃಣಿ, ಅದಿತಿ, ಎಲ್ಲ(ರ)ಮ್ಮ ಎಲ್ಲರೂ ಒಂದೇ– 'ನಾವು' ಒಂದೇ ಸಾಲದೇ ?

ಏಕೆಂದರೆ (for) ಇದೆಲ್ಲ ಬುದ್ಧಿಯು (ವಿಚಾರ ಇದಲ್ಲ) ಆ ಕಣ್ಣನ್ನು ಕುರಿತೇ ಇದೆ. 'ಅಣುರೇಣು ತೃಣಕಾಷ್ಠ'ಗಳೆಲ್ಲವೂ ಹುಟ್ಟಿದ್ದು ಎಲ್ಲಿಂದ ? ನಮ್ಮ ಭಟ್ಟಾಕಲಂಕನು 'ಸರ್ವಭಾಷಾಮಯೀ ಭಾಷಾ ಸರಸ್ವತಿ !' 'ಕಣ್ಣು' ಎಂದೇ ಸೂಚಿಸಿದ್ದಾನೆ. ಈ ಕಣ್ಣಿಲ್ಲದೆ ಇದ್ದರೆ ಈ ಪ್ರಪಂಚದಲ್ಲಿ ಏನುಂಟು ? ಎಲ್ಲೆಲ್ಲೂ ಕಣ್ಣೇ; ಯಾವಾಗಲೂ ಈ ಪ್ರಪಂಚಕ್ಕೆ ಈ ಕಣ್ಣೇ ಆದಿ ಕಾರಣ. ಪರ್ಮೆನೈಡಸ್ ಹೇಳುತ್ತಾನೆ, 'an unchanging Being' ಎಂದು. ಈ ಸನಾತನ ಸಾರ್ವಕಾಲಿಕ ಸತ್‌ತ್ಯದ ಆಧಾರದ ಮೇಲಿನಂತಿದೆ, ಈ ಮಾನವ ಧರ್ಮ: ಸಂಸ್ಕೃತಿ ! ವ್ಯಾಸ ಹೇಳಿದ್ದು ಇದಕ್ಕಿಂತ ಬೇರೆಯಿಲ್ಲ.

## VIII

ಆದರೆ, ಇದನ್ನು 'ಛಾಯಾ ಭಗವತಿ ಎಂದ ಮೂರ್ಖರು, ವೈವಸ್ವತ ಮಾನವ ಧರ್ಮದವರೇ ಇರಲಿಕ್ಕೆ ಬೇಕು. 'ಬಯಲು' ಎಂಬ ಈ ಸಾಂಕೇತಿಕ ಪ್ರತಿಮೆ ಸ್ಮರಿಸಿಕೊಂಡರೆ, ಈ ಇಂದ್ರಿಯಗಳ ಪಾತಳಿಯ

ಅಸ್ತಿತ್ವವನ್ನು ಕಡೆಗಣಿಸಿ, 'ಆದ್ಯ ಮನುವು' ಮಾನವ ಧರ್ಮವನ್ನು ರೂಪಿಸಲು ಅಂದು ಸಮರ್ಥನಾದದ್ದು ಹೇಗೆ, ಎಂಬುದರ ಅರ್ಥವು ಆಗುತ್ತದೆ. ಅದು ಈ ಮಾನವ ಭಾಷೆಯನ್ನು ರೂಪಿಸಿದ್ದು, 'ಪ್ರಜ್ಞಾನೇತ್ರೋ ಲೋಕಃ' ಬುದ್ಧಿಯ (ಜ್ಞಾನ) ಚಕ್ಷುವು ಅರಳತೊಡಗಿದಂದಿನಿಂದ, ಈ ಮನುಜನು ನರ(ಳ)ನಾಗುವ ದಿಕ್ಕಿನಲ್ಲಿ ಓಡತೊಡಗಿದ್ದಾನೆ; 'ಸ್ವಯಂ–ಭೂ' ವ್ಯಕ್ತಿವಾದೀ ನೂತನ ಯುಗಾರಂಭವಾಗಿದೆ. ವೈವಸ್ವತಮನ್ವಂತರವು ಕುಸಿದು ಬಿತ್ತು. ಅವರವರ 'ಕಣ್ಣು' ಅವರವರಿಗೆ ಮಾರ್ಗದರ್ಶಕ 'ಗುರು' ಆಗುತ್ತದೆ. 'ಸಂಸ್ಕೃತ' ಭಾಷೆಯ ವಾಕ್ಕು, 'ಗೀಃವಾಣ–ವಾಣೀ,' ಇದು ನಾದ (ಗೀಃ) ರೂಪ ವಾದದ್ದು 'ಶ್ರುತಿ' ಆಗಿ ಪರಿಣಮಿಸಿದ್ದು, ಲಿಂಗ (ವಾಣ), ಅಂಗ (ವಾಣಿ) ಯೋಗದ ಸಿದ್ಧಿಯ ಫಲಿತ. 'Harmony of Speres' = ಈ ವಿಶ್ವ ಸಂಗೀತದ ನಾದವನ್ನು ಕೇಳಿದ, 'ಅಗ್ನಿಃಸ್ತಂಭ' ಉಪಾಸಕ ಹಿರಾಕ್ಲಿಟಸನಿಗೆ 'Logos' (ಕರ್ಣಪಿಶಾಚ) ಸಿದ್ಧಿಯು ಲಭಿಸಿತ್ತು.

ಹಿರಾಕ್ಲಿಟಸನು ಜೀವಿತದ ಪಾತಳಿಯ ಮೇಲೆ, ಅಂತರ್ ವಿಸಂಗತಿಯು ನಿತ್ಯ (Law of cotradiction) (ಕಾದಲರ) ಕಾಳಗವು, ಇದುವೆ ಮಾನವರ ತಂದೆ: ಇದುವೆ ಪ್ರಪಂಚವನ್ನು ಆಳುವ ಶಕ್ತಿ (king) ಎಂದಿದ್ದಾನೆ. strife is justice ಎಂದು ಹೇಳಿದರೂ ಈತನಿಗೆ, ಈ 'ಅಂತರ್ ವಿರೋಧವನ್ನೂ ಆಳುವ ವಿಶ್ವನಿಯಮವು ಗೊತ್ತಿತ್ತು, ಎಂದು ಸಾಕ್ಷಾತ್ಕಾರೀ ಡಾ. ರಾಮಭಾವು ರಾನಡೆ ಹೇಳುತ್ತಾರೆ, ಹಿರಾಕ್ಲಿಟಸನ ಪ್ರಬಂಧದಲ್ಲಿ. ಝೆಲ್ಲರ ಇದನ್ನು ನಿವೇದಿಸಿದ್ದು ಹೀಗೆ:

Heraclitus censured, Homer, therefore condemning discord. But he emphasised no less strongly the fact that the hidden harmony of nature always restores harmony from contraries, that divine law, like fate, wisdom, the univesal Reason, Zeus or the Deity rules everything, that ıhe fundamental essence changes according to fixed laws into all things and returns from them into itself. (P. 46-47)

ಹಿರಾಕ್ಲಿಟಸನ ಈ ಶ್ರದ್ಧೆಯು 'ಮಾಡಿಮಾಡಿಸುವ' 'ಭಗ'ವಂತನ ಭಕ್ತಿಯ ದ್ಯೋತಕವಾಗಿದೆ! ಹಿರಾಕ್ಲಿಟಸನು ನಂಬಿರುವ ಈ 'Law' ಜೀವಿತದ ಪಾತಳಿಯದು. ಇದಕ್ಕೆ ಪ್ರಮಾಣವು ಏನು? ಈತನು 'Universal Reason' ಇದನ್ನು ವಿಶ್ವನಿಯಮದ ಮಟ್ಟಕ್ಕೆ ಒಯ್ದಿದ್ದಾನೆ! ಇಲ್ಲಿ 'ರೀಜನ್' ಬುದ್ಧಿ ಒದ್ದೆ ಆಗಿದೆ! ಪರ್ಮೆನೈಡಸನ ಭೂಮಿಕೆಯಲ್ಲಿ Being 'ಕಣ್' [o] ಬಯಲು ಇದೇ 'ಬುದ್ಧಿ' ಇರುವಂತೆ, ಹಿರಾಕ್ಲಿಟಸನ ಸಂದರ್ಭದಲ್ಲಿ, ಅಗ್ನಿ(ಸ್ತಂಭ)=ಭಾರತೀಯ ಪರಿಭಾಷೆಯ 'ದಿವ್ಯ ಅಕ್ಷ', ಪ್ಯಾಥ್ಯಾಗೊರಾಸನ One (1)=Tower. ಈ ಭಗವಂತನು ವಿಶ್ವನಿಯಮ ಅಲ್ಲ.

ಹಿರಾಕ್ಲಿಟಸ 'Logos' ಅನಾಹತನಾದ: ಪ್ರಣವದ ಸಿದ್ಧಿಯನ್ನು ಗಮನಿಸಿದರೆ ಇದು ಸ್ಥಳ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಈ ವಿಭಾಗದ್ವಯದ ಟೊಳ್ಳಿನೊಳಗಿನ ನಾದವೇ ಆಗುತ್ತದೆ. ಆದರೆ ಜೀವನ ವಿಶ್ವವನ್ನು ಆಳುವ ನಿಯಮವು 'ಪ್ರಜ್ಞೆ' ಇದು, ಸ್ಥಳ (ಕಾಲ) ರೂಪ ಈ 'ಬಯಲ' ಆಚೆಗೆ ಆಕಾಶದ ಪ್ರಕಾಶತತ್ತ್ವದ ಪಾತಳಿಯ ಮೇಲೆ ಇದೆ. ನಿಃಸಂದಿಗ್ಧ ಶಬ್ದಗಳಲ್ಲಿ ಹೇಳುವ 'Nous: mind' (=ವೈವಸ್ವತ ಮನು) ಈ ಶಕ್ತಿಯೇ ವಿಶ್ವವನ್ನು ತನ್ನ ನಿಯಂತ್ರಣದಲ್ಲಿ ಇರಿಸಿಕೊಂಡಿದೆ. ಪಾಶ್ಚಾತ್ಯ ಪರಂಪರೆಯಲ್ಲಿ ಪೈಥ್ಯಾಗೊರಾಸನ ಮಂತ್ರ: ಮಾಟದಿಂದ 'Reason: Intelligence' ಇದಕ್ಕೆ ಅಗ್ರಪಟ್ಟವು ದೊರೆತು, 'Nous: mind ಇಂದು ಪದಭ್ರಷ್ಟವಾಗಿದೆ.

ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿಯೂ ಆದ ತಿರುವು ಮುರುವು ಇದೇ ಬಗೆಯದ್ದು ಆಗಿದೆ. ಅನ್ಯಾಕ್ಸಾಗೊರಾಸನು Nous: mind ಇದರ ಮಹತ್ವವನ್ನು ಅರಿತೂ, Reason ಮತ್ತು Nous ಇವುಗಳಲ್ಲಿ ಇರುವ ಪ್ರೇರಣಾಶಕ್ತಿಯ ಭೇದವನ್ನು ಗುರುತಿಸಲು ಅಸಮರ್ಥನಾದದ್ದು ಕಾಣುತ್ತದೆ. ಭಾರತೀಯ ಸಂದರ್ಭದಲ್ಲಿ ಕಾಲಿದಾಸನು ಜಾರಿದ್ದು ಹೀಗೆಯೇ.

## ಪ್ರಕರಣ ೮

# ಕವಿಕುಲಗುರು ಕಾಲಿದಾಸನು ಜಾರಿದ್ದು ಎಲ್ಲಿ ?

## ( ಹಲ್ಲಿಲ್ಲದ ಕಪ್ಪೆ, ಹಾವನ್ನು ನುಂಗುವ ಎಡೆಯಲ್ಲಿ )

I

ಈ ವರೆಗಿನ ಸಮೀಕ್ಷೆಯಲ್ಲಿ ದೃಢಪಟ್ಟ ಅಂಶಗಳು ಇವು ಎರಡು

೧) ಬುದ್ಧಿ: ಚಂದ್ರನ ಉಪಾಸನೆಯು, ಯೋನಿಲಿಂಗದ (ಸ್ವ–ಅರ್ಥದ) ದಿಕ್ಕಿನಲ್ಲಿಯೇ ತಳ್ಳಿಕೊಂಡು ಹೋಗಬಲ್ಲುದು; ಪ್ರಜ್ಞಾಯುಕ್ತ ಮನಸ್ಸು ಪ್ರಕಾಶ ತತ್ತ್ವದ ಉಪಾಸನೆಯು, ಸಮಾಜ: ಸಮಷ್ಟಿಯ= ವೈಶ್ವಾನರಾಗ್ನಿಯ ಸೇವೆಯ ದಿಕ್ಕಿನಲ್ಲಿಯೇ ಸೆಳೆದೊಯ್ಯಬಲ್ಲುದು.

ಆದರೆ "ದೆಯ್ವಮಂ ಮೀರಿ ಬಾಳಲ್ ನೆರೆವರಾರ್ ?" ಎಂಬ ಕವಿಯ ಈ ಉಕ್ತಿಯು, ಈತನು ಕಂಡ ವಿಶ್ವನಿಯಮವನ್ನು ಸೂಚಿಸುತ್ತದೆ. ಆದರೆ 'ದೈವ' ಎಂಬ ಈ ಸಂದಿಗ್ಧ–ಅನಿಶ್ಚಿತಾರ್ಥದ ಪದವನ್ನು ಬಳಸುವುದರಿಂದ ಮನಸ್ಸಿನ ಗೊಂದಲವೇ ಹೆಚ್ಚಬಲ್ಲದು. ಈ 'ದೈವ' ರೂಪ ವಿಶ್ವನಿಯಮವು ಪ್ರಜ್ಞಾಪಾತಳಿಯದೊ ? ಅಥವಾ ಪ್ರಾಣಲಿಂಗ ಪಾತಳಿಯದೊ ?

ಈ ಮಾನವ ಜೀವನವನ್ನು ಆಳುವ ಶಕ್ತಿಗಳು ಎರಡು ೧) ಪ್ರಜ್ಞೆ: ಪ್ರಕಾಶತತ್ತ್ವ, ಒಳತಿಳಿಬೆಳಕಿನ ಅರ್ಥ: ವಿಚಾರರೂಪ ಪ್ರಕಾಶದ ಅನುಸಂಧಾನದಲ್ಲಿ ಬಾಳುವ ಪ್ರವೃತ್ತಿಯನ್ನು ಸೂರ್ಯನು (–ವಿವಸ್ವಾನ್= ಸವಿತೃ) ಪ್ರೇರಿಸುತ್ತಾನೆ, ಎಂಬ ಈ ನಿಷ್ಠೆಯಿದೆ. ಇದರಂತೆ–ಪರಿಸ್ಥಿತಿ ಜನ್ಯ ಕಾರಣದ ಅಂತಃ ಪ್ರಚೋದನೆ; Situational Logic ಇದನ್ನು ಅನುಸರಿಸುವ ಬುದ್ಧಿಯು 'ಸ್ವ' ಅರ್ಥದ ಅತಿ ಹೆಚ್ಚು ಹೆಚ್ಚು ಕತ್ತಲಿನ ದಿಕ್ಕಿನಲ್ಲಿಯೇ ಒಯ್ದೀತು ಎಂಬುದನ್ನೂ ಪುರಾತನರು ಅರಿತಿದ್ದರು. ಇದು ಚಾಂದ್ರಶಕ್ತಿಯು

ಪ್ರಚೋದನೆ. ಹಗಲನ್ನಾಳುವ ಶಕ್ತಿ; ಪ್ರಕಾಶರೂಪ ದೇವರು. ಇರುಳ ನ್ನಾಳಳುವ ಶಕ್ತಿ : ಸುತ್ತಲಿನ ಸ್ವಾಮಿ ಚಂದ್ರ : ರಜನೀಶನೇ ಇತ ಬಲ್ಲನು.

ಈ ವಿಶ್ವನಿಯಮವನ್ನೇ ವಂಚಿಸುವ ಪ್ರಯತ್ನ ಈ ಮಾನವ ಹೆಸರಿನ ಪ್ರಾಣಿಯಿಂದ ಆಗಿದೆ,ಆಗುತ್ತಲೂ ಇದೆ. ಇಂಥ ಪ್ರಯತ್ನದ ಮಾದರಿ, ಚಂದ್ರ ನನ್ನು 'ಸೂರ್ಯ' ಎಂದು ಬಗೆಯುವಲ್ಲಿ ವೇದದಲ್ಲೇ ಇದೆ. ಚಂದ್ರನಿಗೆ, ಸೌರ ಭ್ರಾಂತಿ ನಿರ್ಮಾಣಕ್ಕಾಗಿ ಸೋಮ ವೇಷದಲ್ಲಿ ಪೂಜಿಸಲಾಗಿದೆ ! ಸೂರ್ಯನನ್ನು ಚಂದ್ರನನ್ನಾಗಿಸುವ ಪ್ರಯತ್ನದಂತೆ, ಚಂದ್ರನನ್ನು ಸೂರ್ಯ ಹೆಸರಿನಿಂದ ನಂಬಿ ಸಲು ಆಗಿರುವ ಪ್ರಯತ್ನದ ಮಾದರಿ 'ಮೃತಾತ್ ಅಂಡಾತ್ ಜಾತ'ನೆಂಬ 'ಮಾರ್ತಾಂಡ' ! ಮಲ್ಲಾರೀ 'ಮಾರ್ತಾಂಡ', ಸೂರ್ಯ ಎಂದು ನಂಬಿದವರಿ ದ್ದಾರೆ ! ಈ ಬಗೆಯಲ್ಲಿ ಆತ್ಮವಂಚನೆಗೆ ಒಳಗಾಗಿ, ಇದರ ದುಷ್ಪರಿಣಾಮಗ ಳನ್ನು ಅನುಭವಿಸುವಾಗ 'ದೈವ' 'ಹಣೆಬರಹ' ಎಂದು ಗೋಣಗುವುದುಂಟು !

ಇದೆಲ್ಲ 'ಪ್ರಸ್ತಾವನೆ' ಯಾತಕ್ಕೆ ? ಎಂದರೆ ಕವಿ ಕುಲಗುರು ಕಾಲಿ ದಾಸನು, ಮನು ವೈವಸ್ವತನನ್ನು ಸ್ವಂಯಂಭೂನರ(ಳ)= ಚಂದ್ರನ ಹಂತಕ್ಕೆ ತಂದಿರುವುದನ್ನು ಗಮನಿಸುವಾಗ ಉಂಟಾಗುವ ವಿಷಾದವು ಇದಕ್ಕೆ ಕಾರಣ.

II

'ನರ'ರನ್ನು ಮನು–ಜರ ಹಂತಕ್ಕೆ–ಮೇಲಕ್ಕೆ ಒಯ್ಯುವ ಬದಲಾಗಿ, 'ಮನು' ಜರನ್ನು ನರ(ಳ)ರನ್ನಾಗಿಸುವ ದಿಕ್ಕಿನಲ್ಲಿ ಪ್ರಚೋದಿಸುವ ಸಾಹಿತ್ಯಿಕ ರಿಗೆ ಏನೆನ್ನಬೇಕು ? ಕಾಲಿದಾಸನಿಂದಾಗಿರುವ ಅನ್ಯಾಯವು, ಈ ಬಗೆಯದ್ದು ಆಗಿದೆ. ಇದನ್ನು ಮನಗಾಣಲು, ರ (ಲ) ಘುವಂಶ' ಕಾವ್ಯದ ಆರಂಭದ ಈ ಶ್ಲೋಕವನ್ನು ಬಗೆದು ಭಾವಿಸಬೇಕಾಗಿ ಬಿನ್ನಹ.

ವೈವಸ್ವತೋ ಮನಃ ನಾಮ
ಮಾನನೀಯೋಃ ಮನೀಷಿಣಾಂ ।

ಮೊದಲಿನ ಈ ಭಾಗದಲ್ಲಿ, ಆಕ್ಷೇಪಕ್ಕೆ ಎಳ್ಳನಿತೂ ಅವಕಾಶವಿಲ್ಲ. ಆದರೆ ಈ ಉತ್ತರಾರ್ಧ ನೋಡಿ.

ಆಸೀತ್ ಕ್ಷಿತೀಶಾನಾಂ ಆದ್ಯ ।
ಪ್ರಣವತ್ ಛಂದಸಾಂ ಇವ ॥

ಪ್ರಪಂಚದ ಪ್ರಜ್ಞಾವಂತರಲ್ಲಿ, ಪ್ರಜ್ಞಾವಂತರಾಗಿರುವ ಈ ವೈವಸ್ವತ ಮನುವನ್ನು, ಕ್ಷಿತೀಶ'(ರಾಜ) ಎಂದಿರುವಲ್ಲಿ ಮೊದಲನೆಯ ಅನ್ಯಾಯವಾಗಿದೆ ಈ ವೈವಸ್ವತ ಮನುವು ಮಾನವರ ಆದರ್ಶದ ತಾತ್ವಿಕ ಸನಾತನ ಮೂರ್ತಿ; ಒಂದು ವಿಶಿಷ್ಟ ವ್ಯಕ್ತಿಯಲ್ಲ.

'ಕ್ಷಿತೀಶಾನಾಂ' ಎಂಬ ಬಹುವಚನವು ಆಕ್ಷೇಪಾರ್ಹವಿದೆ. 'ಆದ್ಯ'ನು ಇವನು ಒಬ್ಬನೇ ಇರಬೇಕಾದದ್ದು ನ್ಯಾಯ. ಭೂಮಿಗೆ (ಕ್ಷಿತಿಗೆ) ಇಶರು ಎಂಬಲ್ಲಿ ಹಗಲು ಸೂರ್ಯ, ರಾತ್ರಿ ಚಂದ್ರ, ಎಂಬ ಅರ್ಥವು ತಲೆಯೆತ್ತುತ್ತದೆ. ಸೂರ್ಯನು ಇವನು ಆಳುವ ಜೀವನ ವಿಶ್ವವು ಭಾವಾತ್ಮಕವಿದೆ, ಅನುಭವಾತ್ಮಕವಿದೆ; ವಿಧಾಯಕವಿದೆ.

ಆದರೆ, ಚಂದ್ರನು ಆಳುವುದು ಜೀವಿತವನ್ನು ! ಆದರೆ ಇದು ಅಂತರ್ ವಿಸಂಗತಿಯಿಂದಾಗಿ ನಿತ್ಯ ಅರ್ಥಶೂನ್ಯ, ಅಥವಾ ಶೂನ್ಯ ಅರ್ಥದ್ದೇ [0] ಇರುವ ಆನಿವಾರ್ಯತೆಯನ್ನು ಯಾರೂ ತಪ್ಪಿಸಲಾರರು ಅಂತಃಸಂಗತಿಯಲ್ಲಿ ಅರ್ಥವು ಪೋಷಿಸಲ್ಪಡುತ್ತದೆ. ಪರಸ್ಪರ ವಿರುದ್ಧ ಅರ್ಥ=ಆಶಯವು, ಒಂದು ಇನ್ನೊಂದನ್ನು ಇಲ್ಲವಾಗಿಸುತ್ತದೆ. ಆದುದರಿಂದ ಚಂದ್ರನ–ಪ್ರಭಾವವು ಕತ್ತಲೆಯನ್ನು=ವಿನಾಶವನ್ನು ಪ್ರೇರಿಸುತ್ತದೆ. ಆದಕಾರಣ ಇವನನ್ನು 'ಸೂರ್ಯ'ನ ಸಂಗಡ ಅದೇ ಕಾಲಕ್ಕೇ ಪೂಜಿಸಲು ಆಗುವುದಿಲ್ಲ.

ಆದಕಾರಣ 'ಆಸೀತ್ ಕ್ಷಿತೀಶಾನಾಂ' ಎನ್ನುವ ಬದಲು 'ಆಸೀತ್ ಕ್ಷಿತೀನಾಂ ಆದ್ಯಃ' ಎಂಬುದೇ ಲೇಸು.

III

ಕಾಲಿದಾಸನು ವಿಶೇಷ ಜಾರಿದ್ದು:'ಪ್ರಣವಃ ಛಂಧಸಾಂ ಇವ' ಮನು ವೈವಸ್ವತನು ಆದ್ಯ ; ಎಂಬಲ್ಲಿ ಈ ಉಪಮೆಯು ಮೂಲಕ ಆದ್ಯ ಮನು ವೈವಸ್ವತನಿಗೆ ಅಕ್ಷಮ್ಯ ಅಪರಾಧವಾಗಿದೆ, ಈ ಕವಿಕುಲಗುರುವಿನಿಂದ. ಪ್ರಣವೋಪಾಸನೆಯಲ್ಲಿ ಪ್ರತ್ಯಕ್ಷ ಲೈಂಗಿಕ ಕೃತಿಯಿಲ್ಲದೆಯೇ ಮಿಥುನ ಕ್ರೀಡೆಯ ಫಲ ಲಭಿಸುತ್ತದೆ. ಇದು ಮಂತ್ರಶಕ್ತಿ !

ಇದಕ್ಕೆ ಪ್ರಮಾಣ ; ಮಂಡೂಕ್ಯ >ಮಾಂಡೂಕ್ಯ ಉಪನಿಷತ್ತಿನಲ್ಲಿ ಬಂದಿರುವ ಈ 'ಅನುಭವ ಸಿದ್ಧಿಯ, ವರ್ಣನೆ. ಆದ್ಯಶಂಕರಾಚಾರ್ಯರು ಈ ಉಪನಿಷತ್ತನ್ನು 'ವೇದಾಂತಾರ್ಥ ಸಾರ ಸಂಗ್ರಹ' ಎಂದಿದ್ದಾರೆ.

ದಿವ್ಯಚಕ್ಷು : ಚಕ್ಷುಃ ವೈಸತ್ ತಂ ಇದರ ಸಾಕ್ಷಾತ್ಕಾರ ಅನುಭವ ಮತ್ತು 'ಪ್ರಣವ' ಮಂತ್ರ ಸಿದ್ಧಿಯ ಫಲ ಬೇರೆಯಿರಲಾರದು.

'ಪ್ರಜ್ಞಾನೇತ್ರ'ದ ಪ್ರಭಾವದಲ್ಲಿ ಈ ಮನು-ಜನು ಬಹಿರ್ಮುಖನಾಗಿ ಎತ್ತತ್ತಲೋ ಹೊರಟಿದ್ದಾನಲ್ಲ ! ಆದಕಾರಣ ಇವನು 'ಸ್ವಯಂ' ಭೂ ಅಂತರ್ ಆತ್ಮನ್ ನ ಪಶ್ಯತಿ (ಕಠ ೪.೧). ಆದರೆ ಇವನು 'ಆವೃತ್ತ ಚಕ್ಷುಃ' ಆಗಿ, ತತ್‌ಮಯತೆಯಲ್ಲಿ, 'ಸರ್ವಸ್ಯಯೋನಿಃ' ಆಗಿರುವ 'ಓಂಕಾರ' 'ಬ್ರಹ್ಮ' ದಲ್ಲಿ ವಿಲೀನನಾಗಬೇಕು. ಆಗ 'ಪ್ರಜ್ಞಾ' ನಾಶವಾಗುತ್ತದೆ : 'ನ ಅಂತಃ ಪ್ರಜ್ಞಂ, ನ ಬಹಿಃ ಪ್ರಜ್ಞಂ, ನ ಉಭಯತಃ ಪ್ರಜ್ಞಂ, ನ ಪ್ರಜ್ಞಾನ ಘನಂ, ನ ಪ್ರಜ್ಞಂ, ನ ಅ ಪ್ರಜ್ಞಂ।' ಎಂದರೆ ಶೂನ್ಯಸ್ಥಿತಿ ! ಈ ಸಾಧನದಲ್ಲಿ 'ಪ್ರಪಂಚೋಪಶಮಂ ಶಾಂತಂ ಶಿವಂ ಅದ್ವೈತಂ....ಎಂಬ ಹಾಗಿನ ಶೂನ್ಯ [೦] ಸ್ಥಿತಿಯ ಅನುಭವವು ಯೋನಿ ಲಿಂಗೈಕ್ಯದ 'ರಸ'ನಿಮಿಷದಲ್ಲಿಯೂ ಲಭಿಸುತ್ತದೆ. (ಮಾಂ. ೭). ಈ ಅನುಭವವನ್ನು 'ಪ್ರಪಂಚೋಪ ಶಮಂ' 'ಅಸ್ತಿತ್ವದ ಸಾರ್ಥಕ್ಯವಾಯ್ತು' ಎಂಬ ಹಾಗಿನ ಭಾವನೆಯು ಇದೆ. ಈ ಭಾವನೆ 'ಕ್ಷಣಕಾಲ' ಲಿಂಗಾಂಗಯೋಗದಲ್ಲಿ ಲಭಿಸುತ್ತದೆ. ಆದರೆ ಕೂಡಲೆ ಪ್ರತಿಕ್ರಿಯೆಗೆ ಪ್ರಾರಂಭವಾಗುತ್ತದೆ. ಈ ಕಾರಣದಿಂದಲೆ ಇದನ್ನು, ಬಲ್ಲವರು 'ಬಯಲು' ಎಂದರು.

ವೀರೋತ್ಸರ್ಜನವು ಹೀಗೆ ಉಭಯವಿಧ ಮನೋಭಾವಕ್ಕೆ ಪ್ರೇರಕವಿರುತ್ತದೆ ಸ್ಥಳ (ಕಣ್) ಮತ್ತು ಕಾಲ (ಕಣ್)ಇವೆರಡೂ ಒಂದರಿಂದಒಂದು ದೂರವಾಗಲು ಹಾರಯಿಸುವುದೇ ಇಲ್ಲ! ಆದರೆ ಈ ಭೌತಕೂಟಕ್ಕೆ ಮಿತಿ ಇದೆ! ವಿಷಾದಯೋಗದ ಪ್ರಾರಂಭವು ಇಲ್ಲಿಯೇ ಇದೆ.

ಈ ಕಣ್ (ಸ್ಥಲ) ಮತ್ತು ಕಣ್ (ಕಾಲ) ಇವು ಎಡೆಬಿಡದೆ 'ಕಣ್ಣೀ' ಆಗಿ ಇರುವ ಉತ್ಕಟ ಭಾವನೆಯಿಂದಾಗಿ, ಬರುವ ನಿರಾಶೆಯಲ್ಲಿ ಪೂರೂ-ರವ: ಬೊಬ್ಬೆ ಇಡುತ್ತ ಕಾಡು-ಮೇಡು ಹುಚ್ಚನಂತೆ ಅಲೆಯತೊಡಗುತ್ತಾನೆ.

'ಪೂರೂ–ರವ' ಅತ್ಯಂತ ಕೂಗುವ ಮನೋಭಾವ ಸೂಚಕ ಹೆಸರು. ಲಿಂಗಾಂಗಯೋಗದ ಅತೃಪ್ತಿ ಸೂಚಕ ಸಾರ್ವಕಾಲಿಕ ಪ್ರತಿಮೆಯಾಗಿದೆ ಇದು.

ಇದಕ್ಕಾಗಿ ಮನುವೈವಸ್ವತ ಸಂಪ್ರದಾಯವು 'ದಾಂಪತ್ಯಧರ್ಮಕ್ಕೆ', 'ಕುಟುಂಬ ಸಂಸ್ಥೆಗೆ' ಮಹತ್ವವನ್ನು ಕೊಟ್ಟಿದೆ. ಆದರೆ, ಈ ಲಿಂಗಾಂಗಯೋಗದ ಅತೃಪ್ತಿಯು ನಿತ್ಯವಿರುವುದರಿಂದ, ಮುಂಡಕ (ಲಿಂಗ) ಉಪನಿಷತ್ತು, ಹಾಗೂ (ಮಾಂಡೂಕ್ಯ ಯೋನಿ) ಉಪನಿಷತ್ತು, ಈ ಜೀವಿತದೊಳಗಿನ ಅತೃಪ್ತಿಯನ್ನು ದೂರಮಾಡಿ ನರ(ಳ) ಸಂಪ್ರದಾಯರನ್ನು ಅಮರವಾಗಿ ಉಳಿಸಿಕೊಳ್ಳಲು, ಈ ಮಂತ್ರ, ಮಾಟದ ಹಂಚಿಕೆ ಹುಡುಕಿವೆ. ಅಣಿಮಾದಿ ಸಿದ್ಧಿಗಳ ಆಶೆ ಒಡ್ಡಿವೆ. ಮಾನವ ಧರ್ಮಕ್ಕೆ, ದಾಂಪತ್ಯ ಧರ್ಮಕ್ಕೆ, ಸಮಾಜ ಧರ್ಮಕ್ಕೆ ಅಪಚಾರ ಬಗೆದಿವೆ. ಎಲ್ಲ ಉಪನಿಷತ್ತುಗಳು ಈ ಹಾದಿಯವೇ ಇದ್ದರೂ. ಇವುಗಳಲ್ಲಿ ಮುಂಡೂಕ>ಮಾಂಡೂಕ್ಯ ಶ್ರೇಷ್ಠ, ಎಂದು ಗೌಡಪಾದಾಚಾರ್ಯರೂ, ಶಂಕರಾಚಾರ್ಯರೂ, ಇದನ್ನು ಎತ್ತಿಹಾಡಿದ್ದಾರೆ.

'ರಸಿಕ' ಕಾಲಿದಾಸನಿಂದ ಮನುವೈವಸ್ವತನಿಗೆ ಅಲ್ಲ-ಈ ಮಾನವ ಸಂಪ್ರದಾಯಕ್ಕೆ ಆಗಿರುವ ಅಪಚಾರದ ಸ್ಪಷ್ಟೀಕರಣಕ್ಕಾಗಿ 'ಪ್ರಣವ' ಸಾಧನೆಯ ಬಗೆಗೆ ವಿವರಿಸಿ ಹೇಳುವುದು ಅವಶ್ಯವಾಯ್ತು.

## IV

ಈ ಮನುವು ವೈವಸ್ವತನು, ಈತನು ಪ್ರಕಾಶ ತತ್ತ್ವದ ಉಪಾಸಕರ ಸಂಪ್ರದಾಯದ ಆದರ್ಶ ಪ್ರತಿಮೆ. ಈ ಸಂಪ್ರದಾಯದ 'ಆದ್ಯನು' ಆದರ್ಶ ಸ್ವರೂಪನೇ ಇರಬಲ್ಲನು. ಇವನು ಪ್ರಣವದ=ಪ್ರಾಣಲಿಂಗದ 'ಓಂ'ಕಾರ ರೂಪನು, ಎಂಬ ಈ ಹೋಲಿಕೆಯು ಅತ್ಯಂತ ವಿಸಂಗತವಿದೆ. ಕಾಲಿದಾಸನಂಥ ರಸಿಕನಿಂದ ಈ ಅನೌಚಿತ್ಯವು ಆಗಬೇಕೆ ?

"'ಛಂದಸಾಂ' (ವೇದಗಳಿಗೆ) ಪ್ರಣವ=ಓಂಕಾರವು ಹೇಗೋ," ಎಂಬ ಈ ಉಪಮೆಯೇ ಮೂಲದಲ್ಲಿ ಅಸ್ಥಾನೀಯವಿದೆ; ನಿರಾಧಾರವಿದೆ.

ಇಂದಿನ ಪಾಠದಲ್ಲಿ ಸಹ ಋಗ್ವೇದದಲ್ಲಿ ನೇರವಾಗಿ ಓಂಕಾರವಿಲ್ಲ; ಯಜುರ್ವೇದದಲ್ಲಿ ಓಂಕಾರವಿದೆ. ಯಜುರ್ವೇದದ ಅಂಗವಾದ ಈಶೋಪನಿಷತ್ತು ಇದಕ್ಕೆ ನಿದರ್ಶನ.

ಈಗ ಎಲ್ಲ ಮಂತ್ರಪಾಠವು 'ಹರಿಃ ಓಂ' ಎಂಬ ಮಂತ್ರೋಚ್ಚಾರದಿಂದ ಪ್ರಾರಂಭವಾಗುತ್ತದೆ. ಈ 'ಓಂ' ಕಾರ ಧ್ಯಾನವು, ಪ್ರಜ್ಞಾನಾಶದ ಒಂದು ಅಪೂರ್ವ ಸಾಧನ. ಶ್ರೀ ವಿವೇಕಾನಂದರಿಗೆ, ಈ ಓಂಕಾರನಾದ ಆಕರ್ಷಣವು ಹೆಚ್ಚಿದ ಹಾಗೆ, ಈ ಅನುಸ್ಥಾನದಲ್ಲಿ ಅವರಿಗೆ 'ನಾಸಿಕಾಗ್ರದಲ್ಲಿಯೋ,–ಭ್ರೂಮಧ್ಯದಲ್ಲಿಯೋ' 'ಜ್ಯೋತಿ': ಬೆಳಕು ಕಂಡ ಹಾಗೆ ಎನಿಸತೊಡಗುತ್ತದೆ.

ಶ್ರೀ ವಿವೇಕಾನಂದರ ಚರಿತ್ರೆಯಲ್ಲಿ, ಈ ಸಾಕ್ಷಾತ್ಕಾರದ ಬಗೆಗೆ ಉಲ್ಲೇಖವಿದೆ. ಶ್ರೀರಾಮಕೃಷ್ಣರ ಪರಿಚಯವಾಗುತ್ತದೆ. ಇಬ್ಬರೂ ಒಬ್ಬರಿಂದೊಬ್ಬರು ಪರಸ್ಪರ ಆಕರ್ಷಿತರಾಗುತ್ತಾರೆ; ನರೇಂದ್ರನು ಇನ್ನೂ ಶಿಷ್ಯನೆಂದು ದೀಕ್ಷೆ ಪಡೆದಿರಲಿಲ್ಲ. ಆ ಸಂಧಿಕಾಲದಲ್ಲಿ, ಈತನು ಓಂಕಾರ ಧ್ಯಾನವನ್ನು ತನ್ನ ಪಾಡಿಗೆ ತಾನು ಒಳ್ಳೇ ತನ್ಮಯತೆಯಲ್ಲಿ ಪ್ರಾರಂಭಿಸಿರುತ್ತಾನೆ. ಬಿಲ್ವವೃಕ್ಷದ ಕೆಳಗೆ ಕುಳಿತು, ಒಮ್ಮೆ ಧ್ಯಾನಸ್ಥನಾದಾಗ ನರೇಂದ್ರನಿಗೆ, ಈ ಅಪೂರ್ವ ಅನುಭವವು ಥಕ್ಕನೆ ಪ್ರಾಪ್ತವಾಗುತ್ತದೆ.

ಈ ತನ್ನ ಪ್ರಗತಿಯನ್ನು ನರೇಂದ್ರನು, ಶ್ರೀರಾಮಕೃಷ್ಣರ ಎದುರು ನಿವೇದಿಸುತ್ತಾನೆ ಆಗ, ಪರಮಹಂಸರು, ಈ ತರುಣನಿಗೆ 'ಬುದ್ಧಿ' ಹೇಳುತ್ತಾರೆ: 'ಗುರು ದೀಕ್ಷೆಯಿಲ್ಲದೆ, ಈ ಮಂತ್ರೋಚ್ಚಾರ ಸಾಧನೆಯು ಅಪಾಯಕರ; ನಿನ್ನನ್ನು ಈ ಧ್ಯಾನವು ಸರಿಯಾದ ಮಾರ್ಗದಲ್ಲಿಯೇ ಮುಂದುವರಿಸಿಕೊಂಡು ಹೋದೀತೆಂಬ ಭರವಸೆಯು ಇಲ್ಲ; ಈ ಕಾರಣದಿಂದ ಈ ದಾರಿಗೆ, ಈಗಲೇ, ಹೋಗಬೇಡ, ಎಂದು ಎಚ್ಚರಿಸಿದ್ದಾಯ್ತು.

ವೈವಸ್ವತ ಮನುವಿನ ಸಂದರ್ಭದಲ್ಲಿ, 'ಪ್ರಣವಃ ಛಂದಸಾಂ ಇವ' ಎಂಬ ಈ ಉಪಮೆಯು ಅನುಚಿತವಿರುವುದು ನಿಶ್ಚಿತವಿದೆ. ಏಕೆಂದರೆ ಈ ಪ್ರಣವವು, 'ಕತ್ತಲಿನ ಗವಿಯು' ಕಡೆಗೇ ತಳ್ಳಿಕೊಂಡು ಹೋಗುವ ಅಂತಃಶಕ್ತಿಯ ಮಂತ್ರವಾಗಿದೆ. ಈ ಓಂಕಾರವು ಪ್ರಜ್ಞೆಯನ್ನು ಬಧಿರಗೊಳಿಸುತ್ತದೆ: ಇದನ್ನು ಮಾಡೂಕ್ಯ ಉಪನಿಷತ್ತೇ ಒಪ್ಪಿಕೊಳ್ಳುತ್ತದೆ. ಹಾಗಾದರೆ ಈ ವೈವಸ್ವತ ಮನುವಿಗೆ ಸಂಪರ್ಕವಾದ ಔಚಿತ್ಯಪೂರ್ಣವಾದ ಬೇರೊಂದು ಉಪಮೆಯು ಯಾವುದಾದರೂ ಇರಬಹುದಷ್ಟೆ? ಇದು ಯಾವುದು?

## V

'ಮನು'ವು ಹೇಗೆ ಆದ್ಯನೋ, ಹಾಗೆ, "ಜಾತವೇದ ಅಗ್ನಿ"ಯೂ

ಆದ್ಯನು, 'ಜಾತ (ಅದೇ ಹುಟ್ಟಿರುವ), 'ಈ ಅಗ್ನಿಸ್ವರೂಪವೇದವು : Wisdom' ಆದ್ಯವಿದೆ. ಈ ಉಪಮೆಯಿಂದ ಈ 'ವೈವಸ್ವತ ಮನು'ವು ಸಾಕ್ಷಾತ್ 'ಜಾತವೇದ ಅಗ್ನಿ' ರೂಪನು ಆಗುತ್ತಿದ್ದಾನೆ. ಮಾನವರ ಪ್ರಾದು ರ್ಭಾವವು ಆದದ್ದು ಈ 'ಜಾತವೇದ ಅಗ್ನಿ' ರೂಪ Wisdom = ಪ್ರಜ್ಞಾ-ವಿವೇಕದೊಡನೆ. ಆದಕಾರಣ ಈ ಔಚಿತ್ಯವನ್ನು ಅರಿಯಲು ಅರಿಸ್ಟೊಟಲ್ಲನ ಮನನೀಯ ವಿಚಾರಗಳನ್ನು ಸ್ಮರಿಸಿಕೊಳ್ಳಬಹುದು.

**For the absolute mind and highest in the human mind are similar inatute (P. 99)**

ಜೀವನ ವಿಕಾಸದ ಪ್ರಕ್ರಿಯೆಯಲ್ಲಿ, ಆಕಾಶದಲ್ಲಿ (ಅಂತರಿಕ್ಷದ ಅವ ಕಾಶದ ಟೊಳ್ಳಿನಲ್ಲಿ ಅಲ್ಲ) ಪ್ರಾದುರ್ಭವಿಸಿರುವ ವೈವಸ್ವತ = ಸವಿತೃ ಈ **Absolute mind** ಮತ್ತು, ಭಜಕ ಮನು-ಜನ ಮನಸ್ಸು ಈ ಮನಃ ಶಕ್ತಿಯೊಳಗಿನ ಅತ್ಯುಚ್ಚ ತತ್ತ್ವವು ಪ್ರಜ್ಞಾ ರೂಪಮನಸ್ಸು ಇವೆರಡರಲ್ಲಿ ಸಂಪರ್ಕ ಸಂಬಂಧವು ಪ್ರಾರ್ಥನೆಯ ನೆಪದಿಂದ ಶಕ್ಯವಾಗುತ್ತದೆ.

ಈ ಪ್ರಾರ್ಥನೆ ವೈಯಕ್ತಿಕ ಸ್ವಾರ್ಥಕ್ಕಾಗಿ ಇದ್ದರೆ ಇದು ಆ ಭಜಕನ ಮನುಷ್ಯತ್ವಕ್ಕೆ ಕೇಡು. ಸರ್ವೇಸುಖಿನಃ ಸಂತು, ಸರ್ವೇ ಸಂತು ನಿರಾಮಯಾಃ ಎಂಬೀ ಬಗೆಯ ಮಾನವ ಕೋಟಿಯ ಕಲ್ಯಾಣದಲ್ಲಿಯೇ ತನ್ನ ಕಲ್ಯಾಣವಿದೆ, ಎಂಬ ನಿಷ್ಠೆಯು ದೃಢವಿರಬೇಕು.

ಈ ಪ್ರಾರ್ಥನೆಯ ಮುನ್ನ, ಭೂಃ (ದೇಹ) ಮತ್ತು ಭುವಃ (ಅಂತ ರಿಕ್ಷ = ಪ್ರಾಣಲಿಂಗ) ಈ ಸ್ಥಲ-ಕಾಲದ ಆಚೆಗಿನ ಸ್ವರ್‌ಪಾತಳಿಯ ಮೇಲಣ ವೈವಸ್ವನ್ ಅಥವಾ ಸವಿತೃ ಆ **Absolute Mind : Nous** ಇದರೊ ಡನೆ ಸಂಪರ್ಕ ಬೆಳಸುವ ಧ್ಯಾನವು ಅವಶ್ಯವಾಗುತ್ತದೆ.

ತಾನು ದೇಹವಲ್ಲ, ಪ್ರಾಣಲಿಂಗವಲ್ಲ, ಇಂದ್ರನು ತನ್ನಿಂದ 'ಅಹಿವೃತ್ರ'ನ ಶತ್ರು (ಲೈಂಗಿಕ ಪ್ರಚೋದನೆ) ಹಗಲಿನಲ್ಲಿ ಸಾಮಾಜಿಕ ಜೀವನವನ್ನು ಆಕ್ರಮಿ ಸದಂತೆ ನೋಡಿಕೊಳ್ಳುವುದು-ತನ್ನ ಕ್ಷೇತ್ರದಲ್ಲಿ,-ತನ್ನ ಪಾಲಿನ ಕರ್ತವ್ಯ ಎಂಬ ಜಾಗೃತ ಪ್ರಜ್ಞೆ ಇರುವ ಅವಶ್ಯಕತೆ ಇದೆ 'ಮನು'ಜನಿಗೆ.

'ಆದರೆ, ಈ ಪ್ರಾರ್ಥನೆಯು ಸಫಲವಾಗಲು,' 'ಮನು ವೈವಸ್ವತನ-ಸವಿತೃವಿನ 'ಪ್ರತಿಮೆ' ಭಗ್ನವಾಗಿರಲಾಗದು. ಕಾಲಿದಾಸನಿಂದ ವೈವಸ್ವತನ

ಪ್ರತಿಮಾ ಭಂಜನವಾಗಿದೆ. ಇದರ ಪ್ರತಿಷ್ಠಾಪನೆ ಮರಳಿ ಆಗಬೇಕಿದ್ದರೆ, ಈ ಶ್ಲೋಕವು ಸಮರ್ಪಕವಾದದ್ದು ಇರುವ ಅವಶ್ಯಕತೆಯಿದೆ.

ಪ್ರಾಜ್ಞರಿಂದ ಸರಿಪಡಿಸಿಕೊಳ್ಳಲು, ನನ್ನ ಬಲ್ಲ ರೀತಿಯಲ್ಲಿ ಈ ಶ್ಲೋಕವು ಹೀಗೆ ಇರಬಹುದು :

ವೈವಸ್ವತೋ ಮನುರ್ನಾಮ
ಮಾನನೀಯೋ ಮನೀಷಿಣಾಂ|
ಆಸೀತ್ ಕ್ಷಿತೀನಾಂ ಆದ್ಯಃ
ಅಗ್ನಿಃ ಜಾತವೇದ ಇವ |

ಈ ಕಾಲಿದಾಸನು ರಸಿಕ ಮೇಧಾವಿ ಇರುವಂತೆ ಪ್ರಜ್ಞಾವಂತನೂ ಇದ್ದಾನೆ; ಎಂಬಲ್ಲಿ ಸಂದೇಹವಿಲ್ಲ. ಏಕೆಂದರೆ ಅರಿಸ್ಟೋಟ್ಲನು ಹೇಳುವ ಆಕೃತಿ ಹಾಗೂ ಆಶಯಃಗಣ ಇವೆರಡರಲ್ಲೂ ಅನ್ಯೋನ್ಯವು ಇರುತ್ತದೆ! ಎಂಬ ಸೂತ್ರವನ್ನೇ ಈತನೂ ಸೊಗಸಾಗಿ ಹೇಳಿದ್ದಾನೆ. "ನ ತಾದೃಶಾಃ ಆಕೃತಿ ವಿಶೇಷಾಃ ಗುಣ ವಿರೋಧಿನೋ ಭವಂತಿ", ಈ ಸೂತ್ರವನ್ನು ಅರಿತು, ಪ್ರಕಾರ ತತ್ತ್ವದ ಈ ವೈವಸ್ವತನನ್ನು, 'ಕತ್ತಲಿನ ಗವಿಯತ್ತ' ತಳ್ಳುವ ಪ್ರಣವ ಮಂತ್ರಕ್ಕೆ ಹೋಲಿಸಿ ಸತ್ಯಕ್ಕೆ ಅಪಚಾರ ಬಗೆದಿದ್ದಾನಲ್ಲ !

ಗ್ರೀಕ ಪುರಾತನ ಅನ್ಯಾಕ್ಸಾಗೊರಾಸನೂ ಸುಮಾರಾಗಿ ಇದೇ ರೀತಿಯಲ್ಲಿ ಜಾರಿದ್ದಾನೆ! ಅನ್ಯಾಕ್ಸಾಗೊರಾಸನು 'Nous : mind' ಆದ್ಯತತ್ತ್ವ ಎಂಬುದನ್ನು ಕಾಲಿದಾಸನಿಗಿಂತಲೂ ಸಮರ್ಥ ರೀತಿಯಲ್ಲಿ ವರ್ಣಿಸಿದ್ದಾನೆ. ಆದರೆ ಪ್ರಜ್ಞೆ (Nous) ಇದು ಸ್ಥಳಕಾಲದ ಪರಿಮಿತಿಗೆ ಒಳಗಾದದ್ದು (born up with cosmos) ಎಂಬಲ್ಲಿ ಎಡಹಿದ್ದಾನೆ "ಎಂಥ ಗುಣ, ಅಂಥ ಆಕೃತಿ"; ಮನನು ವೈವಸ್ವತನು ಪ್ರಕಾಶದ ಗುಣವುಳ್ಳವ. ಇಂಥ ಮನುವು ತನ್ನಲಿಯೇ ತಾನು ಮಗ್ನನಾಗಿ ಮೈಮರೆತು, 'ನಾದ' ಲೋಲರಾಗಿ ಇದ್ದುಬಿಡಲು ಯಾರನ್ನೂ ಸುಮ್ಮನೆ ಬಿಡಲಾರನು. ವೈಶ್ವಾನರಾಗ್ನಿಯ ಅಂಶವಾದ ಜಾತವೇದ ಅಗ್ನಿರೂಪ ಈ 'ಮನು'=ಮಾನವನು, ಸಮಾಜ-ಸಮಷ್ಟಿಯ ನೆಮ್ಮದಿಗಾಗಿ ಹೋರಾಡುವಲ್ಲಿಯೇ ಕೃತಾರ್ಥತೆಯನ್ನು ಕಾಣ ಬಲ್ಲನು.

ಈ ಕಾಲಿದಾಸನೇ ಹೇಳಿದ್ದೂ ಉಂಟು : 'ಆಕಾರಃ ಸದೃಶಃ ಪ್ರಜ್ಞಃ ಮನು–ಮಾನವರು ಎಂದೂ, ಪ್ರಕಾಶಯುಕ್ತ ತೇಜಃ ಪುಂಜ ಪ್ರಜ್ಞನು, 'ಓಂಕಾರ'=ಪ್ರಣವನಾಮದಲ್ಲಿ ಮೈಮರೆಯುವಲ್ಲಿ ಧನ್ಯತೆಯನ್ನು ತಾಳಲು ಶಕ್ಯವೇ ಇಲ್ಲ. ಓಂಕಾರ, 'ಪ್ರಣವ' ಇದು ಪ್ರಾಣಲಿಂಗ ಚೇತಸದ ಪಾತಳಿಯಲ್ಲಿ ಎಂದರೆ ಏಕಾಂತದ ಕತ್ತಲಿನ ಗುಹೆಯಲ್ಲಿ ಹೊಕ್ಕು ಇರುವ ಸ್ವಭಾವವನ್ನೇ ಪೋಷಿಸಬಲ್ಲದು. ಆದಕಾರಣ, ಈ ಪ್ರಣವ: ಓಂಕಾರ ಇದು, ಕತ್ತಲನ್ನೇ ಪ್ರಚೋದಿಸಬಲ್ಲ ಚಂದ್ರನ (ನಾಗ :ಚಂದ್ರ; ಲಿಂಗ) ಪಾತಳಿಯತ್ತ ತಳ್ಳಿಕೊಂಡು ಹೋಗುವ ಅಂತಃ ಶಕ್ತಿಯು, ಭಯಾನಕ ಮಂತ್ರವಾಗಿದೆ. ಸಂಸಾರವನ್ನು ತೊರೆದು ಅರಣ್ಯವಾಸಿಗಳಾಗುವ ಬಾವಾ, ಭೈರಾಗಿಗಳ ಸಂಪ್ರದಾಯವಿದು. ವಿರಕ್ತ ಸಂನ್ಯಾಸಿಗಳು ಈ 'ಪ್ರಣವ'ದ ಭಕ್ತರು ಇರುತ್ತಾರೆ.

## VII

'ಆಕೃತಿ' ಮತ್ತು 'ಗುಣ' ಇವೆರಡರಲ್ಲಿ ಅನ್ಯೋನ್ಯವಿರುತ್ತದೆ. 'ಎಂಥ ಗುಣ, ಅಂಥ ಆಕೃತಿ'. ಗುಣವೇ ಕೃತಿಗೆ ಪ್ರೇರಿಸುತ್ತದೆ. ಈ ತತ್ತ್ವವನ್ನು ಅರಿತ ಕಾಲಿದಾಸನು ರಾಮ–ಚಂದ್ರನನ್ನು, ಇವನ ವಂಶವನ್ನು ಎಂದರೆ ನರ(ಳ)ರನ್ನು ಸೂರ್ಯ-ವಂಶ ಲಲಾಮ ಎಂದು ಸಂಬಿಸಲು ಈ ಆಭಿಚಾರ ಕೃತ್ಯ ಮಾಡಿದ್ದಾನೆ, ಎಂದು ಬಗೆಯಬೇಕಾಗುತ್ತದೆ.

ಪುಣ್ಯಶ್ಲೋಕ ವೈವಸ್ವತ ಮನುವಿಗೆ ಬದಲು, ಪುಣ್ಯಶ್ಲೋಕರ ಯಾದಿಯಲ್ಲಿ. ಈಗ ಇರುವ ಹೆಸರುಗಳು ಯಾವವು ?

ಪುಣ್ಯಶ್ಲೋಕ ನಳೊ (ರೋ) ರಾಜಾ, ಪುಣ್ಯ ಶ್ಲೋಕೋ ಯುಧಿಷ್ಠಿರಃ ಪುಣ್ಯಶ್ಲೋಕಾ ಚ ವೈದೇಹೀ ಪುಣ್ಯಶ್ಲೋಕೋ ಜನಾರ್ಧನಃ | ಇದರ ವಿವರಣೆಗಾಗಿ, (ವೈವಸ್ವತ ಪು ೨೮) ನೋಡಿರಿ.

ಪ್ರಜ್ಞಾವಂತನು ಮತ್ತು ಬುದ್ಧಿವಂತನು ಇವರ ಈ ಕಾಳಿದಾಸನು, ತನ್ನ ಪ್ರಜ್ಞೆಗೆ (conscience) ಪ್ರಾಮಾಣಿಕನಾಗದೆ, ತನ್ನ ಬುದ್ಧಿಗೆ ಎಂದರೆ ಅಂತರ್ ಆ–ತ್ಮ ಪರಮ ಆತ್ಮ ಎಂಬ 'ಭಗ'–ವಂತನಿಗೆ ಪ್ರಾಮಾಣಿಕನಾಗಿರುವುದಾಗಿ ಬಗೆಯದೆ ಗತಿ ಇಲ್ಲ ! ಭಗವದ್ಗೀತೆಯ ಭಗ–ವಂತನು ಮಾಡಿರುವ ಭಾನಾಮತೀ ಪ್ರಯೋಗದ ಪರಿಣಾಮಕ್ಕೆ ಕಾಲಿದಾಸನು ಬಲಿ ಆಗಿದ್ದಾನೆ.

ಇಂದ್ರಿಯಾಣಿ ಪರಾಣಿ ಆಹುಃ | ಇಂದ್ರಮೇಭ್ಯಃ ಚ ಪರಂ ಮನಃ | ಆದರೆ ಪ್ರಜ್ಞೆಯ ಅಂಗವಾದ ಮನಸ್ಸಿಗಿಂತಲೂ 'ಬುದ್ಧಿ' ಶ್ರೇಷ್ಠವಂತೆ! ಮನಸಃ ತು ಪರಾ ಬುದ್ಧಿಃ ಈ ಮೋಸವು ಮಹಾತ್ಮಾಜೀ ಮಾತ್ರವಲ್ಲ, ಲೋಕಮಾನ್ಯರಿಗೂ ಗಮನಕ್ಕೆ ಬರಲಿಲ್ಲ! ಪ್ರಜ್ಞೆಯನ್ನು ಸ್ಥಿತ=ಸ್ಥಗಿತ ಮಾಡಲು ಹೇಳಿರುವ ಉಪದೇಶವು ಈ ಮನುಜರನ್ನು ನರ(ಳ)ರನ್ನಾಗಿ ಮಾಡಿದೆ; ಗೀತಾ ಭಕ್ತಿಯ, ಈ ದಿವ್ಯಾಧ್ಯಾತ್ಮ ಪಂಥಗಳಿಂದಾಗಿ ಭಾರತದಲ್ಲಿ ಮನುಜರು ಉಳಿದಿಲ್ಲ. ಈ ಕಾರಣದಿಂದಲೇ ಮನು ವೈವಸ್ವತನು, ಭಾರತೀಯ ಆಕಾಶದಲ್ಲಿ ತೊಳಗಿ ಬೆಳಗುತ್ತಿದ್ದರೂ, ಇವನೂ ಕಾಣುತ್ತಿಲ್ಲ! ಪ್ರಣವದ ಪ್ರಭಾವದಲ್ಲಿ, ಇದಕ್ಕೂ ಮೇಲಣ ಪ್ರಕಾಶದ ಪಾತಳಿಯು ಕಾಣಲು ಶಕ್ಯವೇ ಇಲ್ಲ.

ಈ ಮೋಸವು ಇನ್ನೂ ಆಳವಾಗಿದೆ ಉಪನಿಷತ್ತಿನಲ್ಲಿ. ಅಂತರಿಕ್ಷ : ಅವ ಕಾಶ ಇದನ್ನು ಆ-ಕಾಶ (ಪ್ರಕಾಶದ ಪಾತಳಿ) ಎಂದು ನಂಬಿಸಲಾಗಿದೆ. ವೇದದ ಮೋಸವು ಇದೇ ಬಗೆಯದ್ದೇ ಇದೆ: ಸೂರ್ಯೋ ಜ್ಯೋತಿಃ (ಜಹೋಮಿ) ಎಂಬಲ್ಲಿ 'ಜ್ಯೋತಿ' ಇದು ಚಂದ್ರನದೇ ಇದ್ದೀತು. ದೀಪದ್ದು ಜ್ಯೋತಿ! ಆದರೆ 'ಸೂರ್ಯನು ಜ್ಯೋತಿ' ಎನ್ನುವಾಗ ಈ ಸೂರ್ಯನು ನಾರ-ಅಯನ: ಲಿಂಗದ ಪಾತಳಿಯ ಆದಿ.ತ್ಯನಾಗುತ್ತಾನೆ!

ಪಾಶ್ಚಾತ್ಯ ಪರಂಪರೆಯಲ್ಲಿಯೂ 'ಪ್ರಜ್ಞಾ' ಪಾತಳಿಯ ನಾಶ ಮಾಡು ವಲ್ಲಿ, ಪ್ಯಾಥ್ಯಾಗೊರಾಸ ಪಂಥೀಯರು, ಆ ಬಳಿಕ ಕ್ರೈಸ್ತ ಪಂಥೀಯರು ಯಶಸ್ವಿಯಾಗಿದ್ದಾರೆ. ಇದಕ್ಕೆ ಪ್ರಮಾಣಗಳು ಬೇಕಿದ್ದರೆ ನೋಡಿಕೊಳ್ಳಿ, ಕ್ರೈಸ್ತರಿಗೆ ಕೊಟ್ಟಿರುವ ಈ Warning; "Any Christian who accepted the essentials of Aristotalism must arrive at Conclusions contrary to the Faith." (A History of philosophical system; P-212)

ಇದೇ ಬಗೆಯ ಪ್ರಾಂಜಲ ಒಪ್ಪಿಗೆಯು, ಇನ್ನೊಂದು, ಇಲ್ಲಿದೆ:

"The result of Church encounter with the Suncult of antiquity was nothing less than the dethrownment of Helios.

There had never been a suggestion of Compromise, I mean nothing less than the most brusque and determined correction of all sloics pantheist, or platonistic mystical devotion to the sun into transcendentel monism."

(Greek myths and Christian mystery: By Hugo Rehner Bible & Tanner, Newyark 1971, P—93)

VIII

ಭಾರತೀಯರ ಭಾಗ್ಯ: ಅಂಶತಃ ಆದರೂ, ಈ ಕಾಲಿದಾಸನು, ಈ ಮನು: ವೈವಸ್ವತನ ನೆನಹನ್ನು ಇಷ್ಟರ ಮಟ್ಟಿಗಾದರೂ ಉಳಿಸಿಕೊಂಡು ಬಂದಿದ್ದಾನೆ! ಪಾಶ್ಚಾತ್ಯ ಪರಂಪರೆಯಲ್ಲಿ ಕ್ರೈಸ್ತ-ಹಿಬ್ರೂ ಪಂಥೀಯ ನರ(ಳ) ಸಂಪ್ರದಾಯಗಳು Nous: mind ಇದರ ನೆನಹನ್ನೇ ತೊಡೆದು ಹಾಕಿವೆ! ತೀರ ಇತ್ತೀಚೆಗೆ ಇಪ್ಪತ್ತನೆಯ ಶತಕದ ಮಧ್ಯದ ತರುವಾಯ, ಫ್ರಾನ್ಸಿನ ಸಂಶೋಧಕ ಡಾ. ಪಿರ್ರಿ ಟೈವಾರ್ಡ ಡಿ ಕಾರ್ಟಿನ್ ಇವರಿಗೆ 'Noosphere' ಈ ಪಾರಿಭಾಷಿಕ ಪದದ ಅವಶ್ಯಕತೆಯು ಉಂಟಾಗುತ್ತದೆ. ಆಗ ಗ್ರೀಕ ಪುರಾತನ ಪರಂಪರೆಯೊಳಗಿನ 'Nous' ಈ (ಪ್ರಜ್ಞಾ)ತತ್ತ್ವ ಸೂಚಕ ಪಾರಿಭಾಷಿಕ ಪದದ ನೆನಪು ಬರುತ್ತದೆ!

ಈ ಮಾನವ ಜೀವನದ ಅರ್ಥ ಮಾಡುವಾಗ ಜೀವಿತದ ಪಾತಳಿಯ (Biosphere) ಮೇಲಿಂದ ಮಾನವ ಭಾಷೆ ಹೇಗೆ ವ್ಯೈವೆತ್ತಿತು ತಿಳಿಯುವು ದಿಲ್ಲ. ಇಲ್ಲಿ ಜೀವನ ಮೌಲ್ಯಗಳ ಅರಿವೂ ಇಲ್ಲ. ಕೇವಲ ಲೈಂಗಿಕ ಪ್ರಚೋದ ನೆಯ ಈ ಬಾಳಿಗೂ ಮೇಲಣ ಹಂತದ ಪಾತಳಿಯು ಒಂದು ಇರಲೇಬೇಕು. ಮಾನವನಿಗೆ ಭಾಷೆ, ಸಂಸ್ಕೃತಿ, ಶಾಸ್ತ್ರಾದಿಗಳು ಇವುಗಳ ರಚನೆಗೆ ಅವಶ್ಯ ಪ್ರೇರಣಾಕೇಂದ್ರವು ಈ Nous : mind ಪಾತಳಿಯಿಂದ ಲಭಿಸುತ್ತಿದೆ. ಆದ ಕಾರಣ, ಜೀವನದ ವಿಚಾರದಲ್ಲಿ ಈ Nous : Mind ಪಾತಳಿಯನ್ನು ಲೆಕ್ಕಿಸಲೇಬೇಕು, ಎಂಬ ನಿಷ್ಕರ್ಷಕ್ಕೆ ತಲುಪಿದ್ದಾಯ್ತು.

ಫ್ರಾನ್ಸಿನ ಈ ಸಂಶೋಧಕರ Noosphere ಈ ಪಾರಿಭಾಷಿಕ ಪದವು ಅತ್ಯಂತ ಉಚಿತವಿದೆ, ಎಂಬ ಖಾತ್ರಿ ಆದ ಬಳಿಕ ಡಾ. ಜ್ಯೂಲಿಯಸ್ ಹಕ್ಸ್ಲೆ,

ಬ್ರಿಟಿಷ ಸಂಶೋಧಕನೂ ಈ ಪಾರಿಭಾಷಿಕ ಪದವನ್ನು ಸ್ವಾಗತಿಸಿದ್ದಾನೆ. (ಇವರ New Bottles of New wine, ಗ್ರಂಥ ನೋಡಿರಿ.)

ಅತ್ಯಂತ ವಿಷಾದದ ಸಂಗತಿಯೆಂದರೆ, ಗ್ರೀಕ ಸಂಸ್ಕೃತಿಯಲ್ಲಿ Nous : mind ಇದರ ನೆನಹು ಎಂತೋ ಉಳಿದು ಬಂದಿರುವಂತೆ, ಭಾರತೀಯ ಪೂರ್ವ ಪರಂಪರೆಯಲ್ಲಿ 'ಜಾತವೇದ ಅಗ್ನಿ' ಅಥವಾ ಪ್ರಜ್ಞೆ ಇದರ ಹಿರಿಮೆಯ ಸೂಚಕ ಸ್ಪಷ್ಟವಾದ ನಿರ್ದೇಶಗಳು, ನನಗಂತೂ ಎಲ್ಲಿಯೂ ಕಾಣಲು ಸಿಕ್ಕಿಲ್ಲ ! ಅಲ್ಲದೆ 'ಈ ಮನುವೈವಸ್ವತನಿಂದಲೇ' (ಭಾರತೀಯ ಪರಿಭಾಷೆಯಲ್ಲಿ ಹೇಳಬೇಕಾಗುತ್ತದೆ, ಕ್ಷಮಿಸಿ) ಮಾನವಧರ್ಮ : ಸಂಸ್ಕೃತಿ ಪ್ರಾರಂಭವಾಗಿದೆ. ಭಾಷೆ–ಸಂಸ್ಕೃತಿಯನ್ನು ಪ್ರೇರಿಸಿರುವ ಈ ಮನುವಿಗೆ, ನಾವು ಎಷ್ಟು ಕೃತಜ್ಞರಿದ್ದರೂ ಕಡಿಮೆ ಎಂಬ ಪ್ರಜ್ಞೆ ಮೂಡಿದ್ದು ನನ್ನಲ್ಲಿ ಇತ್ತೀಚೆಗೆ.

'ಇಬ್ಬರು ಮನುಗಳು ಭಾರತೀಯ ಪೂರ್ವ ಪರಂಪರೆಯಲ್ಲಿ ! ಎಂಬ ಈ ಸೋಜಿಗದ ಆಘಾತವಾದದ್ದು ೧೯೭೮ರಲ್ಲಿ (ಪ್ರವಾಹ ಪತಿತರ ಕರ್ಮ : ಹಿಂದೂ ಎಂಬ ಧರ್ಮ' ಇದರ ಅನ್ವೇಷಣೆಯಲ್ಲಿ !) ವೈವಸ್ವತ ಮತ್ತು ಸ್ವಾಯಂಭುವ ಈ ಇಬ್ಬರು ಮನುಗಳಲ್ಲಿ ಎರಡನೆಯ 'ಮನು' ಸ್ವಯಂಭೂ ನರ(ಳ)ನಿದ್ದಾನೆ. ಈ ಕಾರಸ್ಥಾನದ ಹಿಂದೆ 'ಭಗ'ವತ್ ಗೀತೆಯ 'ಭಗ'ವಂತ ಕೃಷ್ಣನ ಸಂಪ್ರದಾಯದ ಪುರಾತನರ ಕೈವಾಡವಿದೆ, ಎಂಬ ಖಾತ್ರಿಯಾಯಿತು.

ಈ ಮೋಸದ ದೃಶ್ಯವು ಉಂಟು ಮಾಡಿದ ವಿಷಣ್ಣ ಮನೋಭಾವದಲ್ಲಿ ಇದ್ದಾಗ, ಕಾಲಿದಾಸನ 'ವೈವಸ್ವತನೇ ಆದ್ಯನು' ಎಂಬ ನಿಃಸಂದಿಗ್ಧ ಉಲ್ಲೇಖವು, ನನ್ನನ್ನು ಸಂದೇಹಗಳ ಕೊಳಚೆಯೊಳಗಿಂದ ತಂದಿತು.

## IX

'ಸಂದೇಹಗಳ ಈ ಕೊಳಚೆ' ಯಾವುದು ? ಆದ್ಯ ಮನುವನ್ನು ಸ್ಥಾನ ಭ್ರಷ್ಟಮಾಡಿ, ಈ ಅಗ್ರಪಟ್ಟವನ್ನು, 'ಸ್ವಯಂಭೂ ಮನು'ವಿಗೆ ಕೊಟ್ಟಿದ್ದಾರೆ, ಈ ದಕ್ಷಿಣ ಕಪರ್ದಗಳ ಪಂಥದವರು. ವೈವಸ್ವತನಿಗೆ ೭ನೆಯ ಸ್ಥಾನವಂತೆ !

ನಾನಾ ಹೆಸರಿನ 'ಮನು'ಗಳನ್ನು ಕಲ್ಪಿಸಿ, ಇದೇ ವಾಸ್ತವ ಸತ್ಯ

ಎಂದು ನಂಬಿಸಲಾಗಿದೆ. "Manu: The origener of sociat thought" ಎಂಬ ಪುಸ್ತಕವು, 'ಭಾರತೀಯ ವಿದ್ಯಾಭವನ' ಮುಂಬೈ ಇವರಿಂದ ಪ್ರಕಟವಾಗಿದೆ, (೧೯೭೦). ಇದರ ಲೇಖಕರು ಶ್ರೀ ಕೇವಲ ಮೊಟವಾನಿ. ಶ್ರೀಮಾನ ದಿವಾಕರ ಇವರು ಸಂಪಾದಕರಂತೆ.

ಈ ಲೇಖಕರಿಗೆ ಸ್ವಯಂಭೂಮನು, ವೈವಸ್ವತಮನು ಇವರೊಳಗಿನ ಭೇದವೂ ಗೊತ್ತಿಲ್ಲ! **ಮನುಗಳ ಸಂಖ್ಯೆ ಎಷ್ಟು?** ಈ ಕೊಳಚೆ ಅಗಾಧವಿದೆ! 'ಸ್ವಯಂಭೂ' ಪರಂಪರೆಯ ಈ ಧರ್ಮ ಶಾಸ್ತ್ರವನ್ನು ಕ್ರೋಢೀಕರಿಸಿದವನು (Codification) 'ಭೃಗು' ಹೆಸರಿನ ಒಬ್ಬ ಋಷಿಯೆಂದು ಸಂಪ್ರದಾಯ ಹೇಳುತ್ತದೆ. ಆದರೆ ಈ 'ಭೃಗು' > ಭಾರ್ಗವರು, ಮಹಾಭಾರತವಲ್ಲಿ ಕೈಯಾಡಿಸಿದ್ದಾರೆ, ಎಂದು ಸುಖಟನಕರರು ಸಪ್ರಮಾಣವಾಗಿ ಸಿದ್ಧಪಡಿಸಿದ್ದಾರೆ.

ಈ 'ಭೃಗು' ಎಂಬವನು ಒಬ್ಬನು, 'ರಾತ್ರ್ಯಾಧಿಪತಿ' ಆದ ಆದಿತ್ಯ ವರುಣನ ಪುತ್ರನಂತೆ; ತೈತ್ತಿರೀಯದಲ್ಲಿ ಬರುತ್ತಾನೆ! 'ಭೃಗುಃ ವೈವಾರುಣಿಃ ಪಿತರಂ ಉಪಸಸಾರ.' ಆದರೆ ಈ 'ಭೃಗು' ಎಂಬುದು ಶುಕ್ರ(ರೇತ) **ಆಚಾರ್ಯನ ಇನ್ನೊಂದು ಹೆಸರು! ಈ ಭೃಗುವು, ಮನುಗಳು ಸಪ್ತರು** ಎಂದು ಹೇಳುತ್ತಾನೆ.

ಈ ಹೇಳಿತದಲ್ಲಿ, ಇರುವ ಅಂತಃಸಂಗತಿಯು ಸ್ಪಷ್ಟವಿದೆ: 'ಪ್ರಾಣಾಃ ಸಪ್ತ' ಎಂಬ ನಂಬುಗೆಯು ಉಂಟು. 'ಸಪ್ತ' ಈ ಸಂಖ್ಯೆಯು ಪ್ರಾಣಲಿಂಗ ಸೂಚಕವಿದೆ. ಈ ಪ್ರಾಣಲಿಂಗ ಸಂಪ್ರದಾಯದ ಮನು ಆದ್ಯನು ಸ್ವಯಂಭೂವೇ ಇರಬಲ್ಲನು!

ಮನುಗಳು ಸಪ್ತರು ಎಂದು ಹೇಳುವ ಈ ಸಂಪ್ರದಾಯವು ಎಷ್ಟು ಪ್ರಾಚೀನ? ಏಕೆಂದರೆ ಗೀತೆಯು ಹೇಳುತ್ತದೆ, 'ಮಹರ್ಷಿಯಃ ಸಪ್ತಪೂರ್ತೀ, ಚತ್ವಾರಃ ಮನವಃ ತಥಾ'! ಈ 'ಪೂರ್ತಿ' ಎಂಬ ಸಪ್ತ ಸಂಖ್ಯೆ 'ಸಪ್ತಋಷಿ' ಸೂಚಕವಿದೆ. 'ಪ್ರಾಣಾಃ ವಾ ಋಷಯು' ಎಂದು ಬೃಹದಾರಣ್ಯಕವು ಹೇಳುತ್ತದೆ! ಸುಳ್ಳನ್ನು ಅಭಾವವನ್ನು ಭಾವಾತ್ಮಕವೆಂದು ನಂಬಿಸಲು ಈ ಉಪನಿಷತ್ತು ಹುಟ್ಟಿದೆ.

ಸಪ್ತಋಷಿ = ಪ್ರಾಣ, ಸಪ್ತಮನು = ಪ್ರಾಣ. ಒಂದೇ (ಲಿಂಗ) ಶಕ್ತಿಯೇ ನಾನಾ ರೂಪ ತಾಳಿಲ್ಲವೇ ?

ಈ ಮನು 'ಸಂಖ್ಯೆ ಏಳೇ ಸಾಲದೆ, 'ಚತುರ್ದಶ ಮನು' ಎಂಬ ರೂಢಿಯೂ ಒಂದು ಇತ್ತು. 'ಗಳ' = ಚತುರ್ದಶ ಈ ಸಂಖ್ಯೆ ಮನುಗಳ ಸೂಚಕವೇ ಆಗುತ್ತದೆ, ಎಂದು ಕೋಶ ಹೇಳುತ್ತವೆ !

ಋಗ್ವೇದದಲ್ಲಿ ಬರುವ ಮನು ನಾಮಗಳಲ್ಲಿ ವೈವಸ್ವತನಲ್ಲದೆ ಇನ್ನೂ ೪-೫ ಹೆಸರು ಉಂಟು ! ಈ ಸಪ್ತ ಮನುಗಳಲ್ಲಿ, ವೇದದ ಎಲ್ಲ ಹೆಸರೂ ಇಲ್ಲ ! ಮಹಾಭಾರತದ ನಾರಾಯಣೋಪಾಖ್ಯಾನದಲ್ಲಿ, ಶ್ರೀಮನ್ನಾರಾಯಣನಿಗೆ ಸೃಷ್ಟಿನಿರ್ಮಾಣ ಕಾರ್ಯದಲ್ಲಿ ನೆರವಾದ ಸಪ್ತರ್ಷಿಗಳ ಸಂಗಡ ಒಬ್ಬನೇ ಮನು ಇದ್ದಾನೆ !

ಈ ಪಾಠ ಪರಂಪರೆಗಳಲ್ಲಿ ಯಾವುದನ್ನು ನಂಬುವುದು ? ದಪ್ತರೀ ಎಂಬ ವಿದ್ವಾಂಸರು, ಈ ಮನುಗಳ ಮೇಲಿಂದ ನಮ್ಮ ಸಂಸ್ಕೃತಿಯ ಪ್ರಾಚೀನತೆಯ ಕಾಲವನ್ನು ಅರಿಯುವ ಪರಿಶ್ರಮಪಟ್ಟಿದ್ದಾರೆ !

ಆದರೆ ಕಾಲಿದಾಸನಿಂದ, ನನ್ನ ಮಟ್ಟಿಗೆ ಈ ಸಂದೇಹಗಳ ಉರುಲಿನೊಳಗಿಂದ ಪಾರಾದೆ. ವೈವಸ್ವತ ಮನುವೇ ಆದ್ಯನು, ಎಂದು ಹೇಳಿದ್ದಾನೆ. ಅಲ್ಲದೆ ಆಧುನಿಕ ಸಂಶೋಧಕರ ಮಾನವನ ಪ್ರಾದುರ್ಭಾವದ ಶೋಧದಂತೆ, ಮನು = ಮಾನವನು ಆದ್ಯನು ವೈವಸ್ವತನೇ ಇರಲಿಕ್ಕೆಬೇಕು ಗ್ರೀಕ್ Nous: Mind ಪರಂಪರೆಯಿಂದಲೂ ಇದು ದೃಢಪಡುತ್ತದೆ.

ವೇದದ ಕವಿಗಳು, 'ಮನುಃ ಪಿತಾ' ಎಂದು ಹೇಳುವ ವಾಡಿಕೆಯಿದೆ. 'ಪಿತಾ' ಎಂದರೆ 'ಪಾಲಯಿತಾ' ಎಂಬ ಅರ್ಥವೇ ಹೊರತು 'ಪಿತಾ' ಜನಕ ತಂದೆಯ ಸೂಚಕ ಪದವಲ್ಲ.

ಡಾ. ಪಾಂ. ವೀ. ಕಾಣೆ ಇವರು, 'ಧರ್ಮಶಾಸ್ತ್ರದ ಇತಿಹಾಸ' ಎಂಬ ಮಹಾ ಗ್ರಂಥವನ್ನು ಐದು ಸಂಪುಟಗಳಲ್ಲಿ ಪ್ರಕಟಿಸಿ ಉಪಕಾರಮಾಡಿದ್ದಾರೆ. ಆದರೆ ಡಾ. ದಾಮೋದರ ಕೋಸಾಂಬಿಯವರು ಅಂದಂತೆ, ಈ ಉಪಕಾರವು ಸಂದೇಹಾಸ್ಪದವಾಗುವ ಭೀತಿಯಿದೆ. ಈ ಮಹಾಮಹೋಪಾಧ್ಯಾಯರಿಗೂ ಸ್ವಯಂಭೂ < ಸ್ವಾಯಂಭುವ, ವೈವಸ್ವತ ಈ ಮನುಗಳಲ್ಲಿ ಇರುವ ಅಂತರವು ಗಮನಕ್ಕೆ ಬಂದಿಲ್ಲ !

ವೇದದ ಕವಿಗಳು 'ಮನುವನ್ನು ಪಿತಾ' ಎಂದಿದ್ದಾರೆ, ಎಂಬುದನ್ನು ಹೇಳಿರುವ ಡಾ. ಕಾಳೆಯವರು ಮನು Father of Human race ಎಂಬೀ ಬಗೆಯ ಅರ್ಥವನ್ನೂ ಹೇಳುವ ಈ ಸಂಶೋಧಕರು, ತನ್ನ ಮಕ್ಕಳಿಗೆ ಪಾಲು ಹಂಚಿಕೊಡುತ್ತಿರುವ ಒಬ್ಬ ಮನುವಿನ ಉಲ್ಲೇಖಕ್ಕೂ ಬೆಲೆ ಕೊಟ್ಟು ಅದನ್ನು ನಮೂದಿಸಿದ್ದಾರೆ. ಜನಕ ತಂದೆಯಾಗಿರುವ ಮನು, ಇವನು, 'ಮನು'-ಜರ ಪಿತಾಮನು ಆಗಲು ಶಕ್ಯವೇ ಇಲ್ಲ, ಎಂದು ಸ್ಪಷ್ಟಪಡಿಸಲಿಲ್ಲ ಮನುಗಳ ವಿಚಾರವನ್ನು ಹೀಗೆ ಸಂದಿಗ್ಧವಾಗಿಸಿದ್ದಾಗಿದೆ.

## X
## ಸಂಶಯಾತ್ಮಾ ವಿನಶ್ಯತಿ

ಇಂತು ಭಾರತೀಯರನ್ನು, ಈ 'ಸ್ವಯಂಭೂ' ಮನು ಹೆಸರಿನ ದುಷ್ಟ ಶಕ್ತಿಯು ಭಗ-ವಂತ ರೂಪ ಲೈಂಗಿಕ ಶಕ್ತಿಯು, (೧) ಮನು ಸಮಸ್ಯೆಯನ್ನು ಸಂದೇಹದಲ್ಲಿ ಕೊಳೆಯುತ್ತಿರುವಂತೆ, ಅತ್ಯಂತ ನೀಚ, ಘೋರ, ಕಣ್ಕಟ್ಟನ್ನು ನಿರ್ಮಾಣಮಾಡಿದೆ !

'ಸಂಶಯಾತ್ಮಾ ವಿನಶ್ಯತಿ' ಎಂದು ಈ ಕೃಷ್ಣಕಾರಸ್ಥಾನೀ 'ಭಗ'ವಂತನಿಗೆ ಗೊತ್ತು. ಆದಕಾರಣ ಈ ಅಮೋಘ ನಾರಾಯನೀ ಅಸ್ತ್ರವನ್ನು ಎಸೆದು, ಭಾರತೀಯರ ಪ್ರಜ್ಞಾಯುಕ್ತ ಮನಃಶಕ್ತಿಯ ತೇಜೋವಧೆಯನ್ನು ಮಾಡಬಯಸಿದ್ದುದು ಬಯಲಿಗೆ ಬರುತ್ತಿದೆ! 'ವೈವಸ್ವತಮನು' ಸಂಪ್ರದಾಯದ ಅನ್ವೇಷಣೆಯಲ್ಲಿ; 'ಇತಿಹಾಸ'ದ ಧಾರಣೆಯನ್ನು (Concept) ಇದೇ ಬಗೆಯಾಗಿ ಮಾನವರ ಹಂತದ ಇತಿಹಾಸವು ನರ(ಳ)ರ ಜೀವಿತದ ಇತಿಹಾಸವಾಗಿ ಪರಿಣಮಿಸುವಂತೆ ಮಾಡಿರುವ ಭಯಾನಕ ಕೃತ್ಯವನ್ನು ಈ ಮೊದಲು ವಿವರಿಸಿ ಆಗಿದೆ (ವೈವಸ್ವತ ಭಾಗ ೩; ಪು. ೧೨೬,-೧೭೫)

ಈ ಎರಡೂ 'ಕೃಷ್ಣ' ಕೃತ್ಯಗಳು, ಜೀವನ ವಿಶ್ವವನ್ನು ಆಳುವ, ನಿಯಮಕ್ಕೆ ಸುಸಂಗತವಾಗಿಯೇ ಇವೆ.

**ಪ್ರಾಣಲಿಂಗ ಚೇತಸವು,: ಅಸು-ರ=ಚಾಂದ್ರ: ದಾನವ-ಶಕ್ತಿಯ** ಈ 'ಭಗ'ವಂತ ಪಂಥಗಳು, ಈ ಪ್ರಾಣಲಿಂಗ ಪಾತಳಿಯ ಕೇಂದ್ರದಿಂದ ಪ್ರೇರಿತ ನರ(ಳ)ರ ಕೃತಿಗಳು, ಜೀವನವನ್ನು ಜೀವಿತದ ಹಂತಕ್ಕೆ ತಳ್ಳಲು ಅವಶ್ಯಕವಾದ ಕತ್ತಲೆಯನ್ನು=ಅಜ್ಞಾನ, ಸಂದಿಗ್ಧ, ತುರ್ತುಪರಿಸ್ಥಿತಿ) ನಿರ್ಮಿಸಬಹುದೇ

ಹೊರತು ಇವು ಪ್ರಕಾಶ: ಪ್ರಜ್ಞೆಯನ್ನಲ್ಲ. ನಮಗೆ ಕಾಣುತ್ತಿರುವ ಈ ಕಣ್ಕಟ್ಟು 'ಬುದ್ಧಿ'ಯು ನಿರ್ಮಿಸಿರುವ ಅಂತರ್ ವಿಸಂಗತಿಯ ಮಾಯಾಜಾಲ; ಇದು 'ಜೀವಿತದ ಎಂದರೆ, ಸ್ಥಳ(ದೇಹ) ಮತ್ತು ಕಾಲ (ಪ್ರಾಣಲಿಂಗಚೇತಸ) ಈ ವಿಭಾಗದ್ವಯ ವೃತ್ತಾಕೃತಿಯ ಅಸ್ತಿತ್ವದ ಪಾತಳಿಗೆ ಸಂಬಂಧಿಸಿದ್ದಾಗಿದೆ.

ಆದರೆ, 'ಮನು'ಜನ ಜೀವನದ ಪಾತಳಿಯ ಮೇಲಣ ಪ್ರೇರಣಾ ಕೇಂದ್ರದ ಸಂಪರ್ಕ ಸಾಧಿಸಲು ಶಕ್ಯವಾದರೆ, ಅಂತಃಸಂಗತಿಯು ಹಾಸು-ಹೊಕ್ಕು ಇರುವ ತಾಳಮೇಳದ ತಳಪಾಯದ 'ಮಾನವಧರ್ಮ'ದ ನೂತನ ಯುಗವು ಮರು ಉದಯವಾಗುವ ಶಕ್ಯತೆಯು ಇಲ್ಲದಿಲ್ಲ. ಆದರೆ ಬಾಳ ದಾರಿಯ ನಮ್ಮ 'ರಥದ ಸಾರಥಿ' ಬುದ್ಧಿ=ಭಗವಂತ ಇದ್ದಾನೆ. ಇಂದು ಈ 'ಭಗ'ವಂತ ಬುದ್ಧಿಯನ್ನು ಸಾರಥಿ ಸ್ಥಾನದಿಂದ ತಳ್ಳಿ, ಅಲ್ಲಿ ಪ್ರಜ್ಞೆಯ ಅಂಗವಾದ ಮನಸ್ಸಿನ ಕೈಯಲ್ಲಿ ಈ ಬುದ್ಧಿರೂಪ ಕಡಿವಾಣವನ್ನು ಒಪ್ಪಿಸುವ ಅವಶ್ಯಕತೆಯಿದೆ. ಈ ಕರ್ತವ್ಯಕ್ಕೆ ತಪ್ಪಲಾಗದು, 'ಮನು'ಜತ್ವ ಬೇಕಿದ್ದರೆ. ಡಾ. ಐನ್ಸಟನ್ನರ ದೃಷ್ಟಿಕೋನ ಸೂಚಕ ಈ ಮಾತುಗಳು ಮನನೀಯವಾಗಿವೆ.

The search for a harmonious picture in which unusual facts of life shed their paradoxical nature is more intense and fruitful when the scientist comes fully to realise the infinite complexity of the world and at the same time the casual nature of the contradictory, paradoxical phenomena one observes in it (p. 88)

ಈ ಬಯಲು=ಸ್ಥಳ-ಕಾಲದ ಸಂದರ್ಭದ, ನ್ಯೂಟನ್ನನ Absolute space (ಈಥರ) ಈ ದೃಶ್ಯವು ಅಭಾವರೂಪ ಸ್ಥಾಯಿ ಆಗಿದೆ ಎಂದು, ಗಣಿತದಿಂದ ಲೋಕಕ್ಕೆ ತೋರಿಸಿ ಕೊಟ್ಟ ಶ್ರೇಯಸ್ಸು ಪ್ರಜ್ಞಾ ನೇತ್ರದ ಐನ್ಸಟನ್ನರಿಗಿದೆ. ನರ(ಳ) ಸಂಪ್ರದಾಯಗಳ ಬಯಲನ್ನು (ಕಣ್-ಕಣ್) ಇದನ್ನು ನಂಬಿಸಲು ಮಾಡಿರುವ ಮಾಟವು ಮನು-ಜನ ಪ್ರಜ್ಞಾನೇತ್ರದ ಎದುರು 'ಹುಸಿ'ಯಾಗದೆ, ಇರಲಾರದು.

## ಪ್ರಕರಣ ೯
## ಉಪಸಂಹಾರ

### ೧

ಇಂದು, 'ಬುದ್ಧಿ' (Reason: intelligence) ಇದುವೇ ಶ್ರೇಷ್ಠ, ಎಂದು ನಂಬಿಸಲಾಗಿದೆ! 'ಮನಸ್ಸಿಗಿಂತಲೂ ಬುದ್ಧಿಯೇ ಶ್ರೇಷ್ಠ'

(ಮನಸಃ ತು ಪರಾ ಬುದ್ಧಿಃ) ಎಂಬ ಈ 'ಭಗ'ವಂತನ ಉಕ್ತಿಯು ಮೋಸ ತರುತ್ತಿದೆ! ಆದರೆ ಕಾಲಿದಾಸನಂತಹನು, ಪೂರ್ವಪರಂಪರೆಗಳನ್ನು ಬಲ್ಲವನು ಹೇಳುತ್ತಾನೆ: 'ಈ ಕ್ಷಿತಿಯಲ್ಲಿ ಆದ್ಯನು ಮನು: ವೈವಸ್ವತನು.' ಪ್ರಜ್ಞೆಯ ಅಂಗವಾದ ಮನಃ ಶಕ್ತಿಯೇ ಈ ಪ್ರಪಂಚದ ಆದಿ ಕಾರಣವು ಆಗಿದೆ. ಬುದ್ಧಿ, ಬುದ್ಧಿಗೆ ಸಂಬದ್ಧ ಮನಸ್ಸು, ಇದು ಹುಟ್ಟಿದ್ದು, ಪ್ರಜ್ಞೆ: ಮನಸ್ಸಿನ ತರುವಾಯ ದಲ್ಲಿ. ವಿಕಾಸ ತತ್ತ್ವದ ಕ್ರಮದಲ್ಲಿ ಪ್ರಜ್ಞೆ–ಮನಸ್ಸು ಇದೇ ಆದಿಯಲ್ಲಿ.

ಈ ಬಾಳಿನಲ್ಲಿ ಎರಡು ಸ್ತರಗಳು ಉಂಟು: (೧) ಜೀವನ ಮತ್ತು (೨) ಜೀವಿತ. ಇವೆರಡರಲ್ಲಿ ಇರುವ ಭೇದವನ್ನು ಮರೆಯಿಸಿ ಬಿಡಲಾಗಿದೆ. ವ್ಯಾಸಾದಿಗಳಿಂದ ಈ ಪ್ರಕಾಶ ತತ್ತ್ವದ ಪಾತಳಿ, ಹಗಲಿನ ವ್ಯವಹಾರವಾದ ಕಾರಣ ಜೀವನ ರೂಪ ಈ ಅಸ್ತಿತ್ವವನ್ನು ಭಾವಿಸಿ, ಗ್ರಹಿಸಿಕೊಂಡು ಅರಿಯಲು ಶಕ್ಯವಿದೆ. ಈ ಜೀವನವು 'ಭಾವಾತ್ಮಕ' ಇದೆ. ಆದುದರಿಂದ ಅನುಭವವು ಶಕ್ಯವಿದೆ.

ಆದರೆ ಜೀವಿತವು, ನಿತ್ಯವಾಗಿ ಅ–ಭಾವಾತ್ಮಕ ಸ್ವರೂಪದ್ದೇ ಉಂಟು, ಆದುದರಿಂದ ಇದು ಪ್ರಕಾಶದ ಅಭಾವ = ಜೀವನದ ಅಭಾವ = ಕತ್ತಲಿನಂತೆ ಇದೆ. ಈ ಕಾರಣದಿಂದಲೇ 'ಜೀವಿತ'ವನ್ನು ಭಾವಿಸಿ ಅರಿಯಲು ಶಕ್ಯವಿಲ್ಲ! ಉದಾ: ಜೀವಿತದ ಭಕ್ತರು ಅ–ಮೃತ (ರಸ) ಮೆಚ್ಚಿಕೊಂಡಿರುತ್ತಾರೆ. ಆದರೆ ಅ–ಮೃತ ಈ ಹೆಸರು ಅ–ಭಾವಾತ್ಮಕವಿದೆ. ಅ–ಮೃತ = ಮೃತವಲ್ಲದ್ದು! ಎಂದರೇನು? ತಲೆ!

ಜೀವಂತತನದ,–ಜೀವನದ ಅನುಭವಗಳ ಬಲದಿಂದ 'ಅ–ಮೃತ' [೦] ಇದರ ಅರ್ಥವು ಗಮನಕ್ಕೆ ಬರುತ್ತದೆ! ಈ 'ಅ–ಮೃತ' (ರಸ). ಇದು ಶೂನ್ಯ [೦] ದಲ್ಲಿ ಇದೆ. ಎಂದರೂ ತಪ್ಪು ಆಗಲಾರದು. ಈ 'ಜೀವಿತ'ದ ಉಪಾಸಕರಲ್ಲಿ 'ಅ–ಮೃತ'ವೇ ತಮ್ಮ ಬಾಳಗುರಿ, ಎಂದು ಹೇಳುವದುಂಟು. ಮತ್ತು ಸೋಜಿಗದ ಸಂಗತಿಯೆಂದರೆ 'ಶೂನ್ಯ–ಮಹಾಶೂನ್ಯ' ಸಿದ್ಧಿಯೇ ಪರಮ 'ಪುರುಷಾರ್ಥ' ಎಂದೂ ಹೇಳುವ ಮಾತಿನಲ್ಲಿ ಅರ್ಥವು ಇಲ್ಲದಿಲ್ಲ. ಇದನ್ನು, ಗೀತೆ 'ಗುಹ್ಯಸ್ಥ 'ಅರ್ಥ = 'ಗುಹ್ಯಾರ್ಥ' ಎಂದಿದೆ!

ಇದು 'ಇರುಳಿನ ಸಿದ್ಧಿ'! ಆದಕಾರಣ ಹಗಲಿನಲ್ಲಿ, ಮಾತಿನ ಮುಸುಕು, ಈಅ–ಮೃತಕ್ಕೆ ಅನಿವಾರ್ಯವೇ ಇದೆ.

ಈ ಜೀವಿತವು ಕತ್ತಲನ್ನು ಅಪೇಕ್ಷಿಸುತ್ತದೆ,ಎಂಬುದನ್ನು ಇನ್ನೂ ಒಂದು ಉದಾಹರಣದಿಂದ ಅರಿಯಬಹುದು : 'ಅಗ್ನಿನಾರಾಯಣ '= 'ನೀರಲ್ಲಿ ಇರುವ ಅಗ್ನಿ.' ಇದನ್ನು ನೇರ ಭಾವಿಸಿ ಅರಿಯಲು ಅಶಕ್ಯವಿದೆ. 'ಅತ್ಯಂತ ಶ್ರೇಷ್ಠ ಉಪನಿಷತ್ತು' ಎಂದು ನಂಬಲಾಗಿರುವ ಕಠದಲ್ಲಿ 'ನ–ಚಿಕೇತ ಅಗ್ನಿ' ಹೆಸರು ಇದೆ! ಚಿಕೇತ=ತಿಳಿಯಬಲ್ಲ; ನ–ಚಿಕೇತ (ತಿಳಿಯಲು ಆಗದ)ಅಗ್ನಿ !

ಜ್ಞಾತ ಅಗ್ನಿಯ ಸಂದರ್ಭದಿಂದ ಅರಿಯಬಹುದಾದ ಅ-ಜ್ಞಾತ ಅಗ್ನಿಯು ಇದು. ಆದುದರಿಂದ ಅ-ಭಾವಾತ್ಮಕ ಅಗ್ನಿ ! ಇವನು ಪರ ಮಾತ್ಮನಂತೆ ವಿಶ್ವದಲ್ಲೆಲ್ಲ ತುಂಬಿದ್ದಾನಂತೆ ! 'ಕತ್ತಲಲ್ಲಿಯೆ ಅನುಭವಕ್ಕೆ ಬರ ಬಲ್ಲ' ಲೈಂಗಿಕ ಕ್ರಿಯಾ ಪ್ರಚೋದಕ ಅಗ್ನಿಯು ಈತನು! ಆದಕಾರಣ ಕಠೋ ಪನಿಷತ್ತು ಕತ್ತಲಿನ ಉಪನಿಷತ್ತು ! ಹೀಗೆ ಮಾತಿನ ಮುಸುಕು ಅನಿವಾರ್ಯ ವಿರುವ ಜೀವಿತದ ಈ ಪಾತಳಿಯು ಕತ್ತಲಲ್ಲಿ [೦] ಅಡಗಿರುತ್ತದೆ ! ಮುಸು ಕಿನ ಮಾತಿನ ಇನ್ನೊಂದು ಮಾದರಿ ನೋಡಿಕೊಳ್ಳಿ : ಹಳೆಯ ಗುಡಿಗಳಲ್ಲಿ ಆ ದೇವರ ನಾಗ=ಸರ್ಪ ಇರುತ್ತದೆ, ಎಂಬ ನಂಬುಗೆಯು, ಇಂದಿಗೂ ಉಂಟು ಆದರೆ ಈ ನಾಗನ ವೈಶಿಷ್ಟ್ಯವೆಂದು ಹೇಳಲಾಗುವ ಮಾತು ಅಪೂರ್ವವಿದೆ : ಆ ಪುರಾತನ 'ನಾಗನಿಗೆ ಕೂದಲು ಉಂಟು' ! ಪರೆಬಿಡುವ ಅವಶ್ಯಕತೆಯು ಇರುವ ನಾಗ–ಸರ್ಪಕ್ಕೆ ಕೂದಲು ಇರಲು ಶಕ್ಯವೆ ? ಆದಕಾರಣ, 'ನಾಗ' ಆದಿ-ಶೇಷ, ಸೃಷ್ಟಿಗೆ ಕಾರಣ ಪುರುಷನ–ಮರಿ: ಶೇಷ ! 'ಉಟ್ಟರೂ ತೊಟ್ಟರೂ ಬತ್ತಲೆತನವು ಮುಚ್ಚದು.' ಆದಕಾರಣ ಬಟ್ಟೆಯೇ–ತಕ್ಕೆ ? ಎಂದು ಪ್ರಶ್ನಿಸುವ ದಿಗಂಬರ ಪಂಥಿಗಳು ಇದ್ದಾರೆ ! 'ದಿಗಂಬರ' ಎಂದು ಹೆಸರು ಇದ್ದರೂ ಈತನು ಬಟ್ಟೆ ಕಳಚಿ ಓಡಾಡಲಾರ ! ಏಕೆ ?

ಇದು ಸಾಂಸ್ಕೃತಿಕ ವಿಶ್ವಸ್ಥ ಆಂತರಿಕ ಒತ್ತಾಯ. ಹೊರಗಿನ ಯಾರ ನಿರ್ಬಂಧಕ್ಕಾಗಿ ಬಟ್ಟೆ ಧರಿಸುವ ವಾಡಿಕೆ ಉಂಟಾಗಿಲ್ಲ. ಭಕ್ತರಿಗೆ ಉಪದೇಶ ಮಾಡಲು ರಚಿತ 'ಭಗ–ವತ್ ಗೀತೆಯಲ್ಲಿ, 'ಗುಹ್ಯಾತ್ ಗುಹ್ಯತರ' ಭಾಷೆ ಯನ್ನು ಯೋಜಿಸುವ ಅವಶ್ಯಕತೆಯು ಏನಿತ್ತು ? 'ಭಗ–ವಂತ, ಕತ್ತಲಲ್ಲೇ ಇರಬೇಕಾದ ಶಾಪ ಇವನಿಗೆ.

ಈ ಹೆಸರಿನೊಳಗಿನ 'ಭಗ'=ಕತ್ತಲು ! [೦] ಗವಿ ! ಜೀವನ (ಪ್ರಕಾಶ: ಹಗಲು), ಈ ಬಾಳಿನಲ್ಲಿ ಇರುವಂತೆ ಜೀವಿತ(ಕತ್ತಲು : ಇರುಳು)

ಇದೂ ಉಂಟು. ಜೀವಿತವು ನಿತ್ಯವಾಗಿ ಕತ್ತಲಿನ ಆವರಣದಲ್ಲಿಯೇ ಉಳಿಯಬೇಕು.' ಎಂಬ ವಿಧಿಲಿಖಿತ ಅಥವಾ ವಿಶ್ವನಿಯಮವು ಇದೆ. 'ಜೀವಿತವು.' ಕತ್ತಲಿನ ಆವರಣದಲ್ಲಿಯೇ ಇರುತ್ತದೆ, ಎಂದರೇನು ? ಇದನ್ನು ಸೂಚಿಸಲು, ಅ–ಮೃತ (ರಸ.) ಅಗ್ನಿ–ನಾರಾಯಣ=ನೀರೊಳಗಿನ ಅಗ್ನಿ= ನ–ಚಿಕೇತ ಅಗ್ನಿ ಎಂಬ ಉದಾಹರಣಗಳನ್ನು ಹೇಳುವುದು ಅವಶ್ಯವಾಯ್ತು.

ಆಕೃತಿ ಮತ್ತು ಆಶಯ–ಗುಣ ಇವೆರಡರಲ್ಲಿ ಅನ್ಯೋನ್ಯವಿರುತ್ತದೆ : 'ಗುಹ್ಯ (ಕತ್ತಲಿನೊಳಗಿನ) ಆಶಯವು ಇರುವಾಗ, ಆ ಮಾತುಗಳು ಮುಸುಕು ಧರಿಸುವ ಈ ಕ್ರಿಯೆ, ಸಾಂಸ್ಕೃತಿಕ ವಿಶ್ವದ ಹುಟ್ಟು ಸ್ವಭಾವವಾಗಿದೆ. ಆದರೆ ಬುದ್ಧಿ; ಈ ಸಾಂಸ್ಕೃತಿಯ ಶತ್ರು.

## ಈ ಜೀವಿತವು ಸ್ಥಳ (ಕಾಲ) ದೊಡನೆ ಬದ್ಧವಿದೆ

ಕಂನಾಡರ ಪ್ರಜ್ಞಾನೇತ್ರವು, ಸ್ಥಲ (space) ಇದನ್ನು ಬಯಲು (Void : Vacuum ) ಎಂದು ಹೆಸರಿಸಿದೆ ! ಈ 'ಸ್ಥಲ' ಮತ್ತು ಇದರೊಡನೆ ಬದ್ಧ ಕಾಲ ಇವೆರಡನ್ನೂ ಮೀರಿ ಆ–ಚೆಗೆ ನೋಡುವ ಹುಟ್ಟು ಶಕ್ತಿಯು, ಪ್ರಜ್ಞೆ–ಉಪಜ್ಞೆಯ ಅಂಗವಾದ ಮನಸ್ಸಿನ ನೇತ್ರಕ್ಕೆ ಇದೆ !

ಇದಕ್ಕೆ ಪ್ರಮಾಣವು ಬೇಕೆ ? ಬುದ್ಧಿ (Reason) ತಲೆದೋರುವ ಮೊದಲು ಈ ಸ್ಥಲ (ಕಾಲ) ದೊಡನೆ ಬುದ್ಧ ಜೀವತದ (0) ಅಸ್ತಿತ್ವವು ಶ್ರೇಷ್ಠವೆನಿಸಿದ್ದಿಲ್ಲ ! ದಿವ್ಯಕಥೆಗಳ ದಿಕ್ಕಿನಿಂದ ಈ ಮಾತು ದೃಢಪಡುತ್ತದೆ. ಗ್ರೀಕ ಅಥೆನಾ ತನ್ನ ತಂದೆಯ 'ತಲೆ'ಯಿಂದ ಹುಟ್ಟಿದ್ದಾಳೆ. ಈ ದೇವಿ [0] ಜ್ಞಾನದಾಯಕಳು ಎಂದು ಬಗೆಯಲಾಗಿದೆ. ವೇದದ ಆಂಭೃಣೀ ಕುಮಾರಿ, ಇವಳೂ ತಂದೆಯ 'ತಲೆ'ಯಿಂದ ಹುಟ್ಟಿದ್ದಾಳಂತೆ! ಈ ಆಂಭೃಣಿ=ನೀರೆ, 'ಯಂ ಕಾಮಯೇ ತಂ ಬ್ರಹ್ಮಣಂ ಕ್ರಣೋಮಿ' ಎನ್ನುತ್ತಾಳೆ ! ವೇದದ ಸರಸ್ವತಿಯನ್ನು 'ಮಹೋ ಅರ್ಣಃ (ಸರವ) ರೂಪದಲ್ಲಿ ಕಂಡಿದ್ದಾಗಿದೆ. ಸ್ಟ್ರಾಸ್ ಹೇಳುತ್ತಾನೆ. 'History is connection of mythology'' ಬುದ್ಧಿಯು ವ್ಯೈವೆತ್ತ ಇತಿಹಾಸವು ಇಲ್ಲಿ ಇದೆ.

ಈ ಸ್ಥಲದ (ಕಣ್ [0]) ಆಕರ್ಷಣ–ವಿಕರ್ಷಣದ ಸಂದರ್ಭದಲ್ಲಿ ಈ ನರ(ಳ) 'ಬುದ್ಧಿ'ಯು ಕಾಣಿಸಿಕೊಂಡಿರುವುದಾಗಿ, ಗ್ರೀಕ ಹಾಗೂ ಭಾರತೀಯ ಪುರಾತನ ನಿರ್ದೇಶಗಳಿಂದ ದೃಢಪಡುತ್ತಿದೆ.

ಪ್ರಜ್ಞೆಯ ಅಂಗವಾದ ಮನಸ್ಸು ಜೀವಿತವನ್ನು 'ಇದುವೆ ಶ್ರೇಷ್ಠ' ಎಂದು ಬಗೆಯದೆ ಇದ್ದರೂ, ಈ ಮನು–ಜನು ಜೀವಿತದ ಹಂತವನ್ನು ತೀರ ಕಡೆಗಣಿಸಲು ಶಕ್ಯವೇ ಇಲ್ಲ. ಜೀವಿತಕ್ಕೆ, ಅಂದು : ವೈವಸ್ವತ ಮನುವಿನ ದೃಷ್ಟಿಯಲ್ಲಿ ಇದ್ದ ಸ್ಥಾನವು ಯಾವುದು ? ಇದನ್ನು ಆಗಿನ ಒಂದು ರೂಪಕದ ಸಂದರ್ಭದಿಂದ ಗ್ರಹಿಸಿಕೊಳ್ಳಲು ಶಕ್ಯವಿದೆ.

ಸಮಾಜ: ಸಮಷ್ಟಿಯ–ವೈಶ್ವಾನರಾಗ್ನಿಯ ಮೇಲು ನೋಟದಲ್ಲಿ ಈ ಮಾನವ ಧರ್ಮ: ಸಂಸ್ಕೃತಿಯ ಪಟ್ಟವಸ್ತ್ರವು ತನ್ನ ತಾನೆ ನೇಯಲ್ಪಡುವ ಏರ್ಪಾಟವು ಈ ಜೀವನದ ಪಾತಳಿಯಲ್ಲಿ ಹುದುಗಿದೆ.

ಮಾನವ ಜೀವನದ 'ಹಗಲು' ಇದು ಹಾಸು; ಜೀವಿತದ 'ಇರುಳು' ಇದು ಹೊಕ್ಕು : ಇವೆರಡರ ನೈಸರ್ಗಿಕ ಹೆಣಿಕೆಯಲ್ಲಿ, ಧರ್ಮ: ಸಂಸ್ಕೃತಿಗೆ ಅವಶ್ಯಕ ಪಟವಸ್ತ್ರವು ತನ್ನ ತಾನೆ ಸಿದ್ಧವಾಗುವುದುಂಟು.

ಬಾಳಿನಲ್ಲಿ (ಹಗಲಿಗೆ) ಪ್ರಾಧಾನ್ಯವಿರಲೇಬೇಕಾದ ಜೀವನದ ಪಾತಳಿಗೆ ಪೂರಕ–ಪೋಷಕವಾಗುವ ಮಟ್ಟಿಗೆ ಈ ಜೀವಿತಕ್ಕೆ ಸ್ಥಾನವು ಇದ್ದೇ ಇದೆ; ಇರಲೇ ಬೇಕು.

ಆದರೆ ಬುಧರ–ಬುದ್ಧರ ಬುದ್ಧಿಯು ಪ್ರಭಾವಶಾಲಿಯಾಗತೊಡಗಿದ ಬಳಿಕ ಮಾರುತಿ (||) ಸರಸ್ವತಿ (೦), ಗಣಪತಿ (೧) ಈ ಬಗೆಯ ನಾನಾ ನಾಮ ರೂಪಗಳಿಂದ, ಜೀವಿತದ (ಯೋನಿ–ಲಿಂಗದ) ಆರಾಧನೆಗೆ ಪ್ರಾಶಸ್ತ್ಯ ಬಂದದ್ದುಂಟು. ಇಲ್ಲಿ ಅಭಾವವನ್ನೇ ಸ್ಥಾಯೀ ಎಂದು ನಂಬಿಸಲಾಗಿದೆ ! ಈ ಕಣ್ಕಟ್ಟು: ಮೋಸ ಬಯಲಿಗೆ ಬರಲೇಬೇಕಾಗಿದೆ.

ಆಧುನಿಕ ಭೌತಶಾಸ್ತ್ರಜ್ಞರಲ್ಲಿ, ಬರ್ಗಸನ್ನ, 'ಬುದ್ಧಿ' (Intelligence) ಇದನ್ನು ಕುರಿತ ತನ್ನ ಶೋಧವನ್ನು ಧೈರ್ಯದಿಂದ ಹೇಳಿದ್ದಾನೆ: ಬುದ್ಧಿಯು ವಿಶ್ಲೇಷಣಾತ್ಮಕ ಸ್ವಭಾವವದ್ದು. ಇದು ನೆಲಕ್ಕೆ ತಾಗಿರುವ ಜೀವನ ರೀತಿಯ ಸಂದರ್ಭದಲ್ಲಿ ಆ ತುರ್ತುಪರಿಸ್ಥಿತಿಯಲ್ಲಿ ಮೈವೆತ್ತ ಮನ: ಶಕ್ತಿ. ಇದಕ್ಕೆ ಜೀವನದೊಡನೆ ಸಮರಸವಾಗುವ ಶಕ್ತಿಯಿಲ್ಲ. ಬೇರೆಯಾಗಿ ನಿಂತು, ಜೀವನ ಗ್ರಹಿಸಿಕೊಳ್ಳುವ ಪ್ರಯತ್ನವಿರುತ್ತದೆ. ಗಣಿತ, ಭೂಮಿತಿಯ ಶಾಸ್ತ್ರವು ಜೀವಿತದ ಕ್ಷೇತ್ರ ! ಆದರೆ Logic, ಗಣಿತಶಾಸ್ತ್ರದ ಮೂಲಕ ಜೀವಿತದ ಅರ್ಥ= ತತ್ತ್ವಜ್ಞಾನವನ್ನು ಅರಿಯುವ ದಿಕ್ಕಿನಲ್ಲಿ, ಪ್ಯಾಥ್ಯಾಗೊರಾಸನ ಯುಗದಲ್ಲಿ

ಪ್ರಾರಂಭವಾದ ಪ್ರಯತ್ನಗಳನ್ನೇ ಪಾಶ್ಚಾತ್ಯರಿಂದ ಇಂದಿನಲ್ಲಿಯೂ ಮುಂದು ವರಿಸಲಾಗುತ್ತಿದೆ!

ಜೀವನಾನುಭವಗಳಿಗೇ ಪ್ರಾಧಾನ್ಯವಿರುವ ಇತಿಹಾಸವನ್ನು ದಿವ್ಯಾಥ್ಯಾತ್ಮಗಳ ಬುದ್ಧಿ ವಿಕ್ರತಗೊಳಿಸಿದೆ 'ಇತಿಹಾಸವು ವೃತ್ತಾಕೃತಿಯದು' ಎಂಬ ಪ್ಯಾಥ್ಯಾಗೊರಾಸನ ಪಂಥವು ಇದಕ್ಕೆ ನಿದರ್ಶನ,ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ, 'ಇತಿಹಾಸ'ವನ್ನು ವಿಕೃತಗೊಳಿಸಲಾಗಿರುವ ರೀತಿಯ ವಿವರಣೆಗಾಗಿ, 'ವೈವಸ್ವತ ಮನು ಪ್ರಣೀತ ಮಾನವಧರ್ಮ'ದ ಕೊನೆಯ ಭಾಗ ನೋಡಬಹುದು.

ಈ ಮಾನವನು ವಿಶ್ವನಿಯಮಕ್ಕೆ ಅಂಕಿತನಿಸ್ದಾನೆ; ನಿಯಮವನ್ನು ಮೀರಿ ಬಾಳಲಾರನು.

೧) ಪ್ರಜ್ಞೆಯ ಅಂಗವಾದ ಯಶಸ್ಸಿನಿಂದ ಪ್ರೇರಿತನಾಗಿ, ಬಾಳ ಬಟ್ಟೆಯಲ್ಲಿ ಸಾಗುವಾಗ, ಭಾವಾತ್ಮಕ, ಅಂತಃಸಂಗತಿಯುಕ್ತ ಅರ್ಥ: ವಿಚಾರಗಳ ಅನುಸಂಧಾನದಲ್ಲಿ ನಡೆದರೆ, ಇವನು 'ಮನು'ಜತ್ವಕ್ಕೆ ಎರವಾಗಲು ಶಕ್ಯವಿಲ್ಲ. ಈ ಬಾಳದಾರಿ, ಅರ್ಥ: ವಿಚಾರರೂಪ ಪ್ರಕಾಶಯುಕ್ತ ಜೀವನದ ಪಾತಳಿಯೇ ಇರಬಲ್ಲುದು.

೨) ಇದಕ್ಕೆ ಪ್ರತಿಯಾಗಿ, ಬುದ್ಧಿ ಅಥವಾ ಭಾವನೆಯ ಅಂಗವಾದ ಮನಸ್ಸಿನಿಂದ, ಎಂದರೆ ಜೀವಿತದ : ಸ್ಥಳ (ಕಾಲ)ದ ಸಂದರ್ಭದ ಅಸ್ತಿತ್ವಕ್ಕೆ ಪ್ರಾಧಾನ್ಯವನ್ನಿತ್ತು ಬಾಳತೊಡಗುವಾಗ, ಈ'ಮನು'ಜನು ನರ(ಳ) ನಾಗಿ ಮಾರ್ಪಡದೆ ಇರಲು ಶಕ್ಯವಿಲ್ಲ. ಪ್ರಜ್ಞಾನೇತ್ರದ ಸ್ಥಳದಲ್ಲಿ, 'ದಿವ್ಯ ಚಕ್ಷು: ಅಕ್ಷ' ಇದು ಬಾಳದಾರಿಯ ಬೆಳಕಾಗಿ ಪರಿಣಮಿಸಲೇಬೇಕು.

ಜೀವಿತದ ಪಾತಳಿಯ ವೈಶಿಷ್ಟ್ಯ: ಇಲ್ಲಿ ಅಂತರ್‌ವಿಸಂಗತಿ, ಪ್ರೇರಣಾ ದ್ವಂದ್ವವೇ ಸ್ಥಾಯಿ ಆಗುತ್ತದೆ! ಇದು ನಿಷ್ಕಾರಣವಲ್ಲ. ಏಕೆಂದರೆ. ಈ ಜೀವಿತವು ನಿತ್ಯ ವೃತ್ತಾಕೃತಿ [೦] ಗತಿಯುಳ್ಳದ್ದು ಆಗಿದೆ. 'ಪೂರ್ವ' ಎಂದೊಡನೆ 'ಪಶ್ಚಿಮ' ಎಂಬುದು ಬಂದೇ ಬಂತು! ಹುಟ್ಟು ಇದಕ್ಕೆ ಪ್ರತಿಯಾಗಿ ಸಾವು ಬಂತು. ಒಬ್ಬ ತತ್ತ್ವಜ್ಞನು ಹೇಳುವಂತೆ, ವರ್ತುಲದಲ್ಲಿಯ ಆದಿ (ಬಿಂದು) ಮತ್ತು ಅಂತ್ಯ ಒಂದೇ ಬಿಂದುವಿನಲ್ಲಿ ಸೇರಲೇಬೇಕು! ಆದಕಾರಣ ಈ ಜೀವಿತವು ನಿತ್ಯ ಶೂನ್ಯ [೦] ರೂಪದ್ದು!

ಇಲ್ಲಿ ತಲೆದೋರುವ ಇನ್ನೊಂದು ಮೋಸವನ್ನು ಸ್ಪಷ್ಟವಾಗಿ ಅರಿಯುವ ಅವಶ್ಯಕತೆಯು ಇದೆ.

ನಾವು ಮಾನವರು, ನಿಂತಿರುವ–ಬದುಕುವ, ಈ ಹಂತವನ್ನು, ಸ್ಥಲ (ದೇಹ) ಮತ್ತು ಕಾಲ (ಪ್ರಾಣಲಿಂಗ ಚೇತಸ) ಎಂದು ವಿಂಗಡಿಸಿ ಹೇಳಲಾಗುತ್ತದೆ !

ಆದರೆ, ಈ 'ಕಾಲ' ಎಂಬುದು, ಸ್ಥಲದ ಅಂಗವೇ ಹೊರತು, ಇದಕ್ಕೆ ಸ್ವತಂತ್ರ ಅಸ್ತಿತ್ವವೇ ಇಲ್ಲ! ಆದಕಾರಣ ನಮ್ಮ ಪುರಾತನರು, ಈ ನಿತ್ಯವೃತ್ತಾಕೃತಿಯ [0] ಈ ಸ್ಥಲವನ್ನು ಬಯಲು = ಟೊಳ್ಳು (ಅರ್ಥಶೂನ್ಯ) ಎಂದಿದ್ದು ನಿಷ್ಕಾರಣವಲ್ಲ. ವೇದಾಂತವೂ ಈ ಆಶಯವನ್ನೇ ಇನ್ನೊಂದು ಬಗೆಯಿಂದ ಹೇಳುತ್ತದೆ: 'ಭಸ್ಮಾಂತಂ ಶರೀರಂ' ಈ ಜೀವಿತದ ಪಾತಳಿ ಮೃತ್ಯುಲೋಕ!–ಶ್ಮಶಾನ ರೂಪ !

ಈ ಕಾರಣದಿಂದಲೇ ವೈವಸ್ವತನು>ಮಾನವ ಸಂಪ್ರದಾಯವು 'ಜೀವಿತ ಮಸುವನ್ನು ನಂಬದಿರಲು ಹೇಳುತ್ತದೆ. ಈ ಟೊಳ್ಳು-ಬಯಲ (ಅಂತರಿಕ್ಷದ) ಆಚೆಗೆ ಇರುವ ಪ್ರಜ್ಞೆಯ ಅಂಗವಾದ ಮನಸ್ಸಿನಿಂದ ಪ್ರಚೋದಿತ ಜೀವನದಲ್ಲಿ ನಿಷ್ಠೆಯನ್ನಿತ್ತು ಬಾಳಲು ಬೋಧಿಸುತ್ತದೆ.

ಆದರೆ, ಭೌತಶಾಸ್ತ್ರಜ್ಞರಲ್ಲಿ, ದಿವ್ಯಾಧ್ಯಾತ್ಮವನ್ನು ಬೆನ್ನಟ್ಟಿಕೊಂಡು ಹೊರಟವರಲ್ಲಿ, ಭೌತಸ್ಥಳದ ಈ ಬಯಲು ಆಚೆಗೆ–ವೃತ್ತಾಕೃತಿಯ ಜೀವಿತದ ಆಚೆಗೆ, ,ಮಾನವ ಜೀವನದ ಪಾತಳಿಯೂ ಉಂಟು' ಎಂಬುದನ್ನು ಲೆಕ್ಕಿಸಲು ಸಿದ್ಧರಿರುವವರು ಇಂದು ತೀರ ವಿರಳ ! ಅಂತರ್–ವಿಸಂಗತ–ಪ್ರೇರಣಾ ದ್ವಂದ್ವವು ವೈಶಿಷ್ಟ್ಯವಿರುವ ಈ 'ಬುದ್ಧಿ', ಈ ಭೌತಶಾಸ್ತ್ರ, 'ಅಮೃತಂ ಚೈವ ಮೃತ್ಯುಃ' ಈ ಉಭಯ ಪರಿಣಾಮಕ್ಕೆ ಕಾರಣವಾಗುತ್ತಿರುವುದನ್ನು ಕಾಣುತ್ತಿರುವಾಗಲೂ, ಈ ಬುದ್ಧಿಯನ್ನು ಪ್ರಜ್ಞೆಯ ಅಂಕಿತದಲ್ಲಿ ಇರಿಸಬೇಕು ಎಂಬ ಅರಿವು ಮೂಡಿಲ್ಲ !

ಇಂದು, ನಾವು, ಈ ಬುದ್ಧಿಯ ಕೈಗೊಂಬೆ ಆಗಿದ್ದೇವೆ ! ಈ ಬುದ್ಧಿ = ಸೈನ್ಸು ಇದನ್ನು ನಾವು ನಿಯಂತ್ರಿಸುವ ಅವಶ್ಯಕತೆಯನ್ನು ನಾವು ಕಾಣುತ್ತಿಲ್ಲವೆ ? ಈ ಪ್ರಶ್ನೆ, ಭೌತಶಾಸ್ತ್ರಜ್ಞರಲ್ಲಿ ಬಹುಸಂಖ್ಯರಿಗೆ ಇನ್ನೂ ಸ್ವಲ್ಪವೂ ಹಿಡಿಸಿಲ್ಲ, ಎಂದು ವರದಿ ಆಗಿದೆ.

ಭೌತಶಾಸ್ತ್ರೀಯ ಭೂಮಿಕೆಯವರೇ ಇರಲಿ, ಅಥವಾ ದಿವ್ಯಾಧ್ಯಾತ್ಮದ ಬೆಂಬತ್ತಿದವರೇ ಇರಲಿ, ಇವರು ಸ್ಥಲ (ಕಾಲ)ದೊಡನೆ ಸಂಬದ್ಧ ಜೀವಿತಕ್ಕೇ ಪ್ರಾಧಾನ್ಯವನ್ನೀವ ಅಥವಾ ಇದನ್ನು ತುಚ್ಛವೆಂದು ಬಗೆವ ದೃಷ್ಟಿಕೋನದವ

ರಾಗುವ ಅನಿವಾರ್ಯತೆಯು ಇದೆ. ವೃತ್ತಾಕೃತಿಯ ಈ ಜೀವಿತವು ಜ್ಞಾತಾ ಜ್ಞಾತವಾಗಿ ಮೃತ್ಯು (೦) ತತ್ತ್ವದ ಆರಾಧನೆಗಾಗಿ ಪರಿಣಮಿಸಲೇಬೇಕು. ಆಕೃತಿಗಳಲ್ಲಿ ಅಂತಃಸಂಗತಿಯುಕ್ತ ಅರ್ಥ ಇದ್ದೇ ಇದೆ.

ಅಂತರ್–ವಿಸಂಗತಿ, ಪ್ರೇರಣಾದ್ವಂದ್ವವು ಇದು ಸ್ಥಳ (ಕಾಲ) ಕ್ಕೆ ಸಂಬದ್ಧ ದೃಶ್ಯವಿಶ್ವದ (Phenomenon) ಲಕ್ಷಣ. ಆದರೆ, ಈ ದೃಶ್ಯವೇ 'ವಿಶ್ವ ನಿಯಮ' ಎಂದು ಬಗೆಯಲಾಗುತ್ತಿರುವಲ್ಲಿ, ಮಾನವ ಜೀವನವನ್ನು ರೂಪಿಸಿರುವ, ರೂಪಿಸಬಲ್ಲ ವಿಭಾಗತ್ರಯದ ಪ್ರಕಾಶರೂಪ ಕಾಲಗತಿಯನ್ನು ಲೆಕ್ಕಿಸಲಾಗುತ್ತಿಲ್ಲ ! ನಿಜವಾದ, 'ನಾಳೆ'ಗೆ ಇಂಬಿಲ್ಲದ ವೃತ್ತಾಕೃತಿಯ ಜೀವಿತವು ನಿರಾಶೆಯಲ್ಲಿ ಪರಿಣಮಿಸಲೇ ಬೇಕಲ್ಲವೇ ?

I) 'ಜೀವಿತ'ವನ್ನು ಆಳುತ್ತಿರುವ ಕಾಲಗತಿಯ ಆಕೃತಿ–ಸ್ವರೂಪವೇ ಬೇರೆ; ಮತ್ತು II) ಜೀವನ ವಿಶ್ವವನ್ನು ಆಳುತ್ತಿರುವ ಕಾಲಗತಿಯ ಆಕೃತಿ ಸ್ವರೂಪವೇ ಬೇರೆ.

I) ಸ್ಥಲ (ಕಾಲ)ದೊಡನೆ ಬದ್ಧ ಗತಿಯನ್ನು 'ಕಾಲ' ಎಂಬಲ್ಲಿ ಮೋಸವಾಗುತ್ತದೆ. ಗತಿಯಲ್ಲಿ ಇರುವ 'ಸ್ಥಲವೇ' ಕಾಲ; ಅಥವಾ ಗತಿ ರಹಿತ 'ಕಾಲ' ಸ್ಥಲ ಎನಿಸುತ್ತದೆ ! ಈ ಗತಿಯು ವೃತ್ತಾಕೃತಿ (೦) ಆಗಿರುವಲ್ಲಿ ಹುದುಗಿರುವ ಸಂಕೇತಾರ್ಥದ ಆಳವು ಸೋಜಿಗಗೊಳಿಸುತ್ತಿದೆ.

ಅ) ನಿಜವಾದ 'ನಾಳೆ'ಗೆ ಇಂಬು ಇಲ್ಲದಿರುವ ವೃತ್ತಾಕೃತಿಯನ್ನು 'ಕಾಲ' ಎನ್ನಲಾಗುವುದಿಲ್ಲ. ಆ) ಈ ವೃತ್ತಾಕೃತಿಯ ಜೀವಿತದ ಪಾತಳಿಯ ಮೇಲೆ ಎಲ್ಲವೂ (೦) ಶೂನ್ಯರೂಪಕ್ಕೆ ತಿರುಗಲೇ ಬೇಕು. ನೈತಿಕ ಮೌಲ್ಯಗಳಿಗೆ ಇಲ್ಲಿ ಅವಕಾಶವಿಲ್ಲ.

ಎಲ್ಲವೂ 'ಒಂದ'ರಿಂದ ಆಯ್ತು, ಎಂಬ 'ಏಕಂ ಸತ್' ತತ್ತ್ವದ ದಿವ್ಯಾಧ್ಯಾತ್ಮಗಳಲ್ಲಿ, ತಾಯ್ಗಂಡತನ, ಮಗಳಗಂಡತನದ ಪ್ರೇರಕ ದೇವರುಗಳೇ ಇದ್ದಾರೆ. ಉದಾ : ಅದಿತಿ ಪುತ್ರ 'ಆದಿತ್ಯ' ನೆಂಬ ವಿಷ್ಣು ಈತನು, 'ಆದಿತ್ಯೈ ವಿಷ್ಣು ಪತ್ನ್ಯೈ' ಎಂದು ವೇದ ಹೇಳುತ್ತದೆ. ಈ ವಿಷ್ಣುವು ತಾಯ್ಗಂಡನಾಗುತ್ತಿದ್ದಾನೆ! 'ಅಂಬಾ ರುದ್ರಸ್ಯ ಸ್ವಸಾ' ಇತ್ಯಾದಿ; ಹೀಗೆ ಇರುವ ಈ ದಿವ್ಯಾಧ್ಯಾತ್ಮಗಳೆಲ್ಲವು ನೀತಿ ಬೋಧಿಸುವಾಗ ಇವು ಆತ್ಮವಂಚನೆ–ಪರವಂಚನೆಯನ್ನು ಪ್ರೇರಿಸುವ ಗ್ರಂಥಗಳಾಗುತ್ತಿಲ್ಲವೆ ?

ಮುಂಬೈ-ಪುಣೆ ಭಾಗದಲ್ಲಿ ಆಚಾರ್ಯ (ಭಗವಾನ್) ಎಂದು ಪ್ರಸಿದ್ಧ ನಿರುವ 'ರಜನೀಶ' ಹೆಸರಿನ ಸಾರ್ಥಕ್ಯವು, ಈತನ ಉಪದೇಶದ ಆಶಯದಿಂದ ಸಿದ್ಧವಾಗಿದೆ! ಮಾನವನು ಯಾರು? ''He his no one; only one'! ಇದು ಈ ಮಹಾತ್ಮನ ಉಪದೇಶ ಸಾರ. ಭಗವತ್ ಗೀತೆ, ಕ್ರೈಸ್ತಪಂಥ ಮೊದ ಲಾದ ಸಂಪ್ರದಾಯಗಳಲ್ಲಿಯೂ ಈ ಏಕಂ; (೦) ಅಥವಾ (|) ತತ್ತ್ವವೇ ನಾಮ-ರೂಪ ಭೇದದಿಂದ ಬೋಧಿಸಲ್ಪಡುತ್ತದೆ. ಈ ಸಿದ್ಧನು ಬರೆದ ಸಣ್ಣ ಸಣ್ಣ ಹಲವು ಪುಸ್ತಕಗಳಿವೆ. 'yoga is a Spontaneous happening' 'Beyond and Beyond' ಶಬ್ದಗಳಾಚೆಯಶಬ್ದ=ನಿಃಶಬ್ದಂ ಬ್ರಹ್ಮ ಎಂದರೇನು? From sex to Super Consciousness ಸಂಭೋಗ ದಿಂದ ಸಮಾಧೀ-ಸಿದ್ಧಿಯವರೆಗೆ-ಎಂಬೀ ಬಗೆಯ ವಿಷಯಗಳ ವಿವೇಚನೆಯು ಉಂಟು. ಈ ಪುಸ್ತಿಕೆಗಳಲ್ಲಿ. (ಜೀವನ ಜಾಗೃತಿ ಕೇಂದ್ರ ಮುಂಬೈ—೧)

ಕಂನಾಡ ಜನಪದವು ಎಂದೋ ಹೇಳಿರುವ "ಹಲ್ಲು ಇಲ್ಲದ ಕಪ್ಪೆ ಹಾವು ನುಂಗುವ" ಈ ಪವಾಡವೇ 'ಭಗವತ್' ಗೀತೆಯಲ್ಲಿಯೂ ಉಂಟು. 'ರಜನೀಶ' ಪ್ರಾಂಜಲವಾಗಿ ಹೇಳುವುದನ್ನು ಗೀತೆ ಮುಸುಕಿನ ಮಾತುಗಳಲ್ಲಿ ಹೇಳುತ್ತದೆ. ಗೀತೆಯೊಳಗಿನ 'ರಾಜವಿದ್ಯಾ' 'ರಾಜಗುಹ್ಯ' ವನ್ನು ಕುರಿತು ಬರೆದ ಪುಸ್ತಕದಲ್ಲಿ ನಾನು ಇದನ್ನು ಬಹಿರಂಗಪಡಿಸಿದ್ದೇನೆ.

ಜೀವಿತದ ಪಾತಳಿಯನ್ನು ಬಯಲು-ನಿರ್ವಯಲು ಎಂದು ಚಿತ್ರಿಸಿರು ವಲ್ಲಿ ಇದರ ನಿಜಸ್ವರೂಪವನ್ನು ಪುರಾತನರು ಅರಿತಿದ್ದರೆಂಬಲ್ಲಿ ಸಂದೇಹವೇ ಇಲ್ಲ.

ಹಿಂದೊಮ್ಮೆ, ಭೌತ ಸ್ಥಲವು [|] ಮಾತ್ರ ಉಂಟು, ಕಾಲ ಎಂದು, (೧) ಎಂಬುದು ಕೇವಲ ಕಾಲ್ಪನಿಕ, ಎಂಬುದನ್ನು ಬಲ್ಲವರು, ಬರಿ ದೇವಿಯ ಮಂಡಲೋಪಾಸಕರಾಗಿದ್ದರು. ಈ ದೇವಿಯ [೦], ಗಂಡನೆಂಬ ದೇವರು ಹುಟ್ಟಿದ್ದು, ದೇವಿಯು ಜನಿಸಿದ ಬಳಿಕ! ನಮ್ಮ ದೇವಿಯ 'ಪತಿ' ಎಂಬುವರು ದೇವಿಗಿಂತ ವಯಸ್ಸಿನಿಂದ ಚಿಕ್ಕವರು! ಹಾಗಿರಲಿ. 'ಛಾಯಾಭಗವತಿ' ಎಂಬ ಈ ದೇವತಾ ಪ್ರತಿಮೆಯು ಒಳಗೊಂಡಿರುವ ಮೂಲಾರ್ಥವು, ಈ ಶಬ್ದ ಶಿಲ್ಪಿಯ ಸಾಕ್ಷಾತ್ಕಾರ: ದರ್ಶನದ ಉಚ್ಚ ಮಟ್ಟವನ್ನು ಗಮನಕ್ಕೆ ತಂದು ಕೊಡುತ್ತದೆ. ಅಲ್ಲದೆ 'ಸ್ಥಲ'ದೊಡನೆ ಉಂಟು ಎಂಬ 'ಕಾಲ'ದ ಸ್ವತಂತ್ರ

ಅಸ್ತಿತ್ವವನ್ನು ಕಲ್ಪಿಸಲಾಗಿರುವಲ್ಲಿ ಒಳಗೊಂಡಿರುವ ತಿಳಿಗೇಡಿತನ ಅಥವಾ ಮೋಸವೂ ಬಯಲಿಗೆ ಬರುತ್ತನೆ. ಶ್ರೀ ಸೂಕ್ತದ ಮೂಲ ಪಾಠದಲ್ಲಿ, ವಿಷ್ಣು ಅಥವಾ ರುದ್ರನ = ಪುರುಷನ ಹೆಸರೇ ಇಲ್ಲ !

ಈ ಪ್ರಪಂಚರೂಪ 'ಸ್ಥಲ' ಇದು 'ಬಯಲು = ಟೊಳ್ಳು' (Vacuum) ಸ್ವರೂಪದ್ದು ಇದ್ದುದು ಕಲ್ಪಿತವಲ್ಲ. ಈ ನೆಲವು ತನ್ನ ವ್ಯೈಸುತ್ತ ತಿರುಗುವಾಗ ಉಂಟಾಗುವ (೦) ಆಕೃತಿಯು ಟೊಳ್ಳು: 'ಕೃಷ್ಣವಿವರ' ರೂಪದ್ದು ಆಗುತ್ತದೆ! ಏಕೆಂದರೆ ನೆಲದ ನೆಳಲ ಇದು. ಈ 'ಛಾಯೆ'ಯನ್ನು ಇಲ್ಲಿ 'ಭಗ'ವತಿ ರೂಪದಲ್ಲಿ ಕಂಡಿದ್ದಾಗಿದೆ ! ಕಾಲಿ = ಕರಿಯುಳು ಏಕೆ ? 'ಛಾಯಾ' ಭಗವತಿ, ಶುಭ್ರಳು ಇರಲು ಶಕ್ಯವೇ ? ಕಾಲಿ = ದುರ್ಗೆಗೆ 'ಛಾಯಾ ಭಗವತಿ' ಎಂಬ ಪರ್ಯಾಯನಾಮವಿದೆ. ಇವಳು ಮೃತ್ಯು ಸ್ವರೂಪಳು ! ರುಂಡ = ಅಕ್ಷಮಾಲಾ ಧಾರಣಿ ! ಕರಿಯ ಕಾಲದ ಉಪಾಸನೆ ಮೃತ್ಯುಶಕ್ತಿಯ ಆರಾಧನೆಯಾಗಲೇ ಬೇಕಷ್ಟೆ ? ಸಂಭೋಗದಿಂದ 'ಮುಕ್ತಿ' = ಸಮಾಧಿ ! ಕರಿಯಕಾಲ ಕೃಷ್ಣಭಕ್ತಿ, ಲೋಕ ವಿನಾಶಕ ಶಕ್ತಿ ಆಗಲೇಬೇಕಲ್ಲವೆ? 'ಕಾಲಃ ಅಸ್ಮಿ' 'ಲೋಕಕ್ಷಯಕೃತ್ ಪ್ರವೃದ್ಧಃ' ಎಂದು ಗೀತೆಯೆ ಒಪ್ಪಿಲ್ಲವೇ ?

ಈ ಕಾರಣದಿಂದಾಗಿ ವೈವಸ್ವತಮನು ಪ್ರಣೀತ ಮಾನವಧರ್ಮವು 'ಕರಿಕಾಲ' ಬಿಟ್ಟು, ಶುಭ್ರ : ಶುಭಕಾಲದ ಆರಾಧನೆಯನ್ನು ಹೇಳುತ್ತಿದೆ ! ಆಗಾಮಿ 'ನಾಳೆ'ಗಳತ್ತ ಅವ್ಯಾಹತವಾಗಿ ಸಾಗಿರುವ ನಿನ್ನೆ→ಇಂದು ಸ್ವರೂಪ ಪ್ರಕಾಶ ತತ್ತ್ವದ ವಿಭಾಗತ್ರಯದ ಕಾಲಗತಿಯನ್ನು ಅನುಸರಿಸಿ ಅರ್ಥ = ವಿಚಾರ ರೂಪ ಪ್ರಕಾಶ ತತ್ತ್ವದ ಅನುಸಂಧಾನ ದಲ್ಲಿ ಬಾಳಲು ಸಮಾಜ = ಸಮಷ್ಟಿ ರೂಪ ವೈಶ್ವಾನರಾಗ್ನಿಯ ಸೇವೆ ಯಲ್ಲಿ ಕೃತಾರ್ಥರಾಗಲು ಮನುವೈವಸತ್ವನು ಮಾನವಕೋಟಿಗೆ ಬೋಧಿಸು ತ್ತಿದ್ದಾನೆ.

೪

ಹಿಂದೊಮ್ಮೆ ವೈವಸ್ವತಮನು ಪ್ರಣೀತ ಮಾನವಧರ್ಮವು ಜೀವಂತವಿತ್ತು; ಪ್ರಭಾವಶಾಲಿಯಾಗಿತ್ತು. ಇಂದಿನಲ್ಲೂ, ಈ ವೈವಸ್ವತನ ಮನ್ವಂತರವೇ ಇದೆ ! ಆದರೆ, ಇದು ತನ್ನ ತಾನೇ–ಕುಸಿದು ಬೀಳುವ ಹಾಗಿನ ಕಣ್ಕಟ್ಟು, ಮಾಟ, ಅಭಿಚಾರ ಕೃತ್ಯಗಳನ್ನು ಮಾಡಿದ್ದಾಗಿದೆ ! ಈ ಮಂತ್ರಮಾಟ

ಗಳನ್ನು ಎಸಗಿದ್ದು ವಸಿಷ್ಠ–ವ್ಯಾಸಾದಿ 'ಪರಮ ಪೂಜ್ಯ' ಎಂಬ ಪುರಾತನ ಕಾಲದ ಗುರು ವರ್ಗ ! ಇಂದಿನ ನರ–ನಾರ–ಅಯನ–ಉಪಾಸನಾ ಸಂಪ್ರದಾಯದ ಪ್ರಸ್ಥಾಪಕರು, ಯಾರು ಮತ್ತೆ ?

ಈ ಆರೋಪವನ್ನು ಸಪ್ರಮಾಣವಾಗಿ ಸಿದ್ಧಪಡಿಸುವ ಪ್ರಮಾಣಗಳು ಉಂಟೆ ? ಈ ಅಂಶಗಳನ್ನು ಹಲವು ಬಾರಿ ಹೇಳಿದ್ದಾಗಿದೆ. 'ವೈವಸ್ವತಮನು ಪ್ರಣೀತ ಮಾನವ ಧರ್ಮ' ಈ ಗ್ರಂಥದಲ್ಲಿ ಮೇಲಣ ಆರೋಪಗಳು ನಮೂದ ಇವೆ. ಈ ಗ್ರಂಥ ಪ್ರಕಟವಾಗಿ ಒಂದು ವರುಷ ಮುಗಿಯ ಬಂದಿತು. ಕರ್ನಾಟಕ ಕಾಲೇಜಿನ ಪ್ರೊ. ಕೆ. ಎಸ್. ನಾರಾಯಣಾಚಾರ್ಯರು 'ಸಂಯುಕ್ತ ಕರ್ನಾಟಕ' ಪತ್ರಿಕೆಯಲ್ಲಿಯೂ, ಡಾ. ಕೆ. ಎಸ್. ಕೃಷ್ಣಮೂರ್ತಿ ಅವರು, ಬೆಂಗಳೂರಿನ 'ಪ್ರಜಾವಾಣಿ'ಯಲ್ಲಿಯೂ ಸುದೀರ್ಘ ವಿಮರ್ಶೆ ಮಾಡಿದ್ದಾರೆ. ಆದರೆ ಇವರಿಬ್ಬರೂ ವಿದ್ವಾಂಸರಲ್ಲಿ ಒಬ್ಬರೂ ಸಹ ಈ ಗ್ರಂಥದೊಳಗಿನ ನಿಷ್ಕರ್ಷವನ್ನು ಎತ್ತಿಕೊಂಡು 'ಅದನ್ನು ನಿರಾಧಾರ' ಎಂದು ಸಿದ್ಧಪಡಿಸಿ ನನ್ನ ಸತ್ಯಾನ್ವೇಷಣೆಗೆ ನೆರವಾಗುವ ಉಪಕಾರ ಮಾಡಲಿಲ್ಲ ! ತಮ್ಮ ಸಂಪ್ರದಾಯವಂತಿಕೆಗೆ ಪೆಟ್ಟು ಬಿದ್ದೀತೆಂಬ ವ್ಯಥೆಯು ಅವರ ಆ ಎರಡೂ ವಿಮರ್ಶೆಗಳ ಉದ್ದಕ್ಕೂ ಹೊರಹೊಮ್ಮಿ ಬಂದಿದೆ !

ವೈವಸ್ವತ ಮಾನವಧರ್ಮವನ್ನು, ಇಲ್ಲವಾಗಿಸಲು ನರ(ಳ)ಸಂಪ್ರದಾಯಗಳು, ಮಾಡಿರುವ ನೀಚ, ಹೀನ ಸ್ವರೂಪದ ಅಭಿಚಾರ ಕೃತ್ಯದ ಒಂದು ಮಾದರಿ ಇಲ್ಲಿ ಇನ್ನೂ ಒಮ್ಮೆ ಎತ್ತಿ ಹೇಳುತ್ತೇನೆ; ಇದು ಸುಳ್ಳೆಂದು ಸಿದ್ಧವಾದರೆ ನನಗೆ ಸಂತೋಷವೇ ಇದೆ.

೧) 'ಬ್ರಹ್ಮದ್ವಿಷೇ ಶರವೇ ಹಂತವೈ' ರುದ್ರಾಯ ಧನುಃ ಆತನೋಮಿ (X. ೧೨೫).

ಇಲ್ಲಿ ಯೋನಿ–ಲಿಂಗೈಕ್ಯದ ಮೂಲಕ ಮಾಡಲಾಗಿರುವ ಅಭಿಚಾರ ಕೃತ್ಯವಿದೆ. ಈ ಕುಮಾರಿ ತನ್ನ ಬಿಲ್ಲನ್ನು, ರುದ್ರ=ಶಿಪಿ–ವಿಷ್ಣುವಿನ 'ಬಾಣ'ಕ್ಕಾಗಿ ಹಿಗ್ಗಿಸಿ ಕಾದು ನಿಂತಿದ್ದಾಳೆ !

ಈ ದೇವಿ 'ಕುಮಾರಿ' ಆದಿಶಕ್ತಿ ! ಇವಳು ಹೇಳುತ್ತಾಳೆ: ಅಹಂ ರುದ್ರೇಭಿಃ, ಆದಿತ್ಯೈಃ, ವಿಶ್ವೇದೇವೈಃ (ಸಹ) ಚರಾಮಿ ! ಕಂನಾಡ ಗರತಿಯರು 'ಹದಿನೆಂಟು' ಎಂದು ಹೇಳುವ ಟೀಕೆ ಈ 'ಕುಮಾರಿ'ಗೆ ಅನ್ವಯಿಸುತ್ತಿದೆ.

II) ಈ 'ಕುಮಾರಿ'ಯೇ ತಾನು 'ಬ್ರಹ್ಮನ್' ಶಕ್ತಿ. ಕೇನೋಪನಿಷತ್ತಿನಲ್ಲಿ, ಈ ಕುಮಾರಿ ಹೈಮವತಿ ಹೆಸರಿನಲ್ಲಿ ಉಕ್ತಳಾಗಿದ್ದಾಳೆ. ಅಲ್ಲಿ ಈ 'ಭಗ'ವತಿಯು **'ಜಾತವೇದ ಅಗ್ನಿ'** ಮತ್ತು 'ಶಿಶ್ನೋದೇವಾಃ ಶತ್ರು' ಎಂಬ 'ಇಂದ್ರ' ಈ ಪ್ರತಿಮಾ ಭಂಜನಕ್ಕಾಗಿ ಅಭಿಚಾರ ಕೃತ್ಯವಿದೆ!

ಈ ಶ್ರೀದೇವಿ ಕೊನೆಗೆ ಸಾಧಕರಿಗೆ, ಮಂತ್ರ ಮಾಟಗಳು ಸಿದ್ಧಿಸಲು ಹೇಳಿರುವ ಸಾಧನವು ಯಾವುದು? **ತತ್ ವನಂ (೦) ಉಪಾಸೀತ!**

III) **ಇನ್ನೊಂದು ಬಗೆಯ ದುಷ್ಕೃತ್ಯದ ಮಾದರಿ: ಪುರುಷ ಶಬ್ದ ಪ್ರತಿಮೆ!** ಇದು ಬರಿಯ 'ಗಣ್' ಚಿತ್ರವಲ್ಲ; **ಕಣ್‌ಸಹಿತ ಗಣ್=**ವ್ಯಾಸ ರೂಪವು ಇದು! ಇವೆರಡನ್ನು ಈ ಮೊದಲು ಹಲವು ಬಾರಿ ಹೇಳಿದ್ದಾಗಿದೆ. ಆದುದರಿಂದ ಮತ್ತೆ ಪುನರುಕ್ತಿ ಬೇಡ.

**ಸಂ–ಸ್ಕೃತ ಎಂಬ ಹೆಸರಿಗೇ ಕೇಡ ತಂದಿವೆ, ಈ ಭಾನಾಮತಿ ಅಭಿಚಾರ ಕೃತ್ಯಗಳು! 'ಸಂಸ್ಕೃತ ಭಾಷೆ' ಆರ್ಯರದು!** ಈ ಆರ್ಯರೆಂಬವರು ನರ(ಳ)ರೂ ಇದ್ದರು; ಇರಲೇಬೇಕು. ಆದರೆ, ಇವರು ಮಾಟಗಾರಿಕೆ, ಮೋಸಗಾರಿಕೆಯ ಧಂದೆಯವರು 'ಆರ್ಯರೊ'? ಎನ್ನುವ ಹೊತ್ತು ಬಂದಿದೆ, ಇಂದ ಈ ವಶಿಷ್ಠ–ವ್ಯಾಸಾದಿಗಳ ಈ ಪರಂಪರೆಯನ್ನು ಕಾಣುವಾಗ!!

"ಕಾರಣವಿಲ್ಲದೆ ಕಾರ್ಯವು ಸಂಭವಿಸುವುದಿಲ್ಲ, ಕಾರ್ಯ ಕಾರಣ ಸಂಬಂಧವು ಈ ಜೀವನ ವಿಶ್ವದ ತಳಹದಿಯಲ್ಲೇ ಇದೆ", ಎಂಬ ಮಹಾಮಾನವ ಐನ್ಸ್‌ಟನ್‌ರ ವಚನವು ಸುಳ್ಳಲ್ಲ."

'ಪರಮಶ್ರೇಷ್ಠ ಸಂಸ್ಕೃತಿಯು ಭಾರತೀಯರದು' ಎಂಬುದು ತೀರ ಸುಳ್ಳು ಅಲ್ಲ. **'ಮಾನವಧರ್ಮ ಇದು ಜೀವನ ವಿಶ್ವಸ್ಥ ಸನಾತನ ನಿಯಮಗಳ ಆಧಾರದ ಮೇಲೆ ನಿಂತಿದೆ, ಎಂಬುದನ್ನು ವಿವರಿಸಿ ಆಗಿದೆ.**

**ಆತ್ಯಂತ ಅಭಾವಾತ್ಮಕ** ಆದಿತ್ಯ=ಪುರುಷ, ವಿಷ್ಣು, ಕೃಷ್ಣ, ರುದ್ರ, ಗಣಪತಿ... ಇತ್ಯಾದಿಗಣ್‌ಡನ್ನು **ದೇವರು ಎಂದು ಆರಾಧಿಸುತ್ತಿರುವಲ್ಲಿ** ಭಾರತೀಯರಿಂದ, ಜೀವನ ವಿಶ್ವಸ್ಥ ಸನಾತನ ನಿಯಮದ ಭಂಗವು ಆಗುತ್ತ ಬಂದಿದೆ! We can flout the laws of man; (but) we can not flout the laws of Nature (Fichte)

# ಜೀವನ-ವಿಶ್ವದ ವೈಚಾರಿಕ ಆಕೃತಿ

## (ಬಾಳ ಬಟ್ಟೆಯ ಹೊಳಹು)

### ಸೂರ್ಯ (ವಿವಸ್ವನ್ ಸವಿತೃ)

### ಜೀವನ ನಿಷ್ಠೆಯ ಸ್ವರೂಪ

I

೧) ಜೀವಿತವು ಜೀವನದ ಅಂಗವಾಗಿದೆ; ಇದರ ಅರ್ಥ : ನರ(ಳ)ನು 'ಮನು'-ಜನ ಅಂಗವಾಗಿದ್ದಾನೆ. ಇದು ನಿಷ್ಠೆ; ಇಲ್ಲಿ ಆ-ಚಾರ ಮತ್ತು ವಿಚಾರ ಇವೆರಡರಲ್ಲಿ ಮನು ಸಮಯದ ಪಾತಳಿಯ ಮೇಲೆ ಅಂತಃಸಂಗತಿಯು ಶಕ್ಯವಿರುತ್ತದೆ. (ನಿಃ ಸ್ಥಾ-ನಿಷ್ಠಾ)

೨) ಹೀಗೆ ನಿಷ್ಠೆ ಹಾಗೂ ಶ್ರದ್ಧೆಯಲ್ಲಿ ಅಂತರವಿರಲು ಕಾರಣವಿದೆ; **ಜೀವನವು** ಭಾವಾತ್ಮಕ; ಧಾರಣಾತ್ಮಕ (Concept) ಸ್ವರೂಪದ್ದು ಇದ್ದುದ ರಿಂದ ಇದು ಅನುಭವಾತ್ಮಕವೂ ಆಗಿದೆ. ಆಗಾಮಿ ನಾಳೆಗಳತ್ತ ಸಾಗಿರುವ ನಿನ್ನೆ-ಇಂದುಗಳ ರೂಪ ಪ್ರಕಾಶ ತತ್ತ್ವದ ಕಾಲಗತಿ; ಮಾನವನ ಇತಿಹಾಸ ಸಂಭವಿಸುವ ಪಾತಳಿ. ಜೀವಿತವು ಅಭಾವಾತ್ಮಕವಾಗಿದೆ. ಸ್ಥಲದೊಡನೆ ಬದ್ಧ ಕಾಲಗತಿಯ ಮೂಲಕ ಇದು ವೃತ್ತಾಕೃತಿಯ ಇತಿ-ಹ-ಆಸವೇ ಆಗಬಲ್ಲುದು.

II

**ಜೀವನ ವಿಶ್ವಸ್ಥ ವಿಕಾಸತತ್ತ್ವದ ಪ್ರಕ್ರಿಯೆಯಲ್ಲಿ,** ಅಭಾವಾತ್ಮಕ ಜೀವಿತದ ಪಾತಳಿಯ **ನರ(ಳ)ನಿಗೆ,** 'ಮನು'-ಜತ್ವವು ಲಭಿಸಿದೆ.

ಈ ಮನು-ಜಃ ಮಾನವನು ವಿಶ್ವನಿಯಮಕ್ಕೆ ಅಂಕಿತನಿದ್ದಾನೆ. ಆದ ಕಾರಣ, ತನ್ನ ನರ(ಳ)ತ್ವವನ್ನು, ಮನು-ಜತ್ವಕ್ಕೆ ಅಂಕಿತವಾಗಿ ಇರಿಸಲು ಅಸಮರ್ಥನಾಗುವಾಗ, ಈ ಮಾನವನು ಮರಳಿ ನರ(ಳ)ನಾಗಿ ಮಾರ್ಪಡುವ ದನ್ನು ತಪ್ಪಿಸಲು ಯಾರಿಂದಲೂ ಶಕ್ಯವಿಲ್ಲ.

ಅಭಾವವು ಭಾವಾತ್ಮಕಕ್ಕೆ ಸಾಪೇಕ್ಷವಿರಲೇಬೇಕು. ಆದರೆ ಸ್ವತಂತ್ರ ಅಸ್ತಿತ್ವವೇ ಇಲ್ಲದ ಅಭಾವಾತ್ಮಕ ಜೀವಿತವು ಬುದ್ಧಿಯ ಬಲದಿಂದ ಸ್ವತಂತ್ರ ಅಸ್ತಿತ್ವದ ದಾರಿಯಲ್ಲಿ ಹೊರಟಾಗ, ಭ್ರಷ್ಟಾಚಾರಕ್ಕೆ, ಪ್ರಳಯಕ್ಕೆ ಆಮಂತ್ರಣವು ದೊರೆಯುತ್ತದೆ.

### ಚಂದ್ರ (ರಜನೀಶ)

### ಜೀವಿತದ (ಬಯಲಿನ) ಶ್ರದ್ಧೆಯ ಸ್ವರೂಪ

I

೧) ಇದು ಅಂತರ್-ವಿಸಂಗತ ಪ್ರೇರಣಾದ್ವಂದ್ವಾತ್ಮಕ ಸ್ಥಳ (ದೇಹ)ಕ್ಕೆ ಬದ್ಧವಾದ ಕಾಲ (ಪ್ರಾಣಲಿಂಗ), ಈ ವಿಭಾಗದ್ವಯದ ಸನ್ನಿವೇಶದ ಬಾಳಿ ನಲ್ಲಿ ನಡೆವಳಿ-ನುಡಿವಳಿ ಇವೆರಡರಲ್ಲಿ ಹೊಂದಾಣಿಕೆ ಉಳಿಯಲು ಶಕ್ಯವಿಲ್ಲ. ಆದಕಾರಣ, ಇಲ್ಲಿ 'ನಿಷ್ಠೆ' ಅಶಕ್ಯ. ಆದುದರಿಂದ ನರ(ಳ) ಸಂಪ್ರದಾಯದ ಇಂದಿನ ಋಗ್ವೇದದಲ್ಲಿ 'ಶ್ರದ್ಧೆ' ಎಂಬ ಹೊಸ ಪರಿಭಾಷೆಯನ್ನು ಪ್ರಶಂಸಿಸ ಲಾಗಿದೆ. (X. ೧೫೧)

ಶ್ರದ್ಧಾ=Faith, 'ನಿಜ' ಎಂಬ ನಂಬುಗೆ, "think anything true" ಎಂದು ಕೋಶ ಅರ್ಥ ಹೇಳುತ್ತದೆ.

೨) ಜೀವಿತಕ್ಕೆ ಶ್ರದ್ಧೆ ಅನಿವಾರ್ಯ; ಏಕೆಂದರೆ ಇದು ಅ-ಭಾವಾತ್ಮಕ ಅಸ್ತಿತ್ವದ ಪಾತಳಿ; ಇದರ ಅರ್ಥ = ಇಲ್ಲದೇ ಇದ್ದರೂ, 'ಉಂಟು' ಎಂಬ ಆಭಾಸ ನಿರ್ಮಿಸುವ ಸ್ಥಳ-ಕಾಲದ ಸನ್ನಿವೇಶದ ಅಸ್ತಿತ್ವದ ಸ್ವರೂಪವು ಇದು. ಆದುದರಿಂದ ಅಭಾವವನ್ನು-ಇಲ್ಲದೆ ಇರುವುದನ್ನು-'ಉಂಟು' ಎಂಬ ಸಂಭ್ರಮ ನಿರ್ಮಿತಿಗೆ ಶ್ರದ್ಧೆಯು ಬೇಕಾಗುತ್ತದೆ. ಉದಾ: 'ಅ-ಮೃತ'; ಅಗ್ನಿ ನಾರಾಯಣ; ನರ; ಮುಂ.

II

ಜೀವಿತಕ್ಕೆ ಆಧಾರಭೂತ 'ಸ್ಥಳ'= ಬಯಲು ಇದು ಗತಿಯಲ್ಲಿ ಇರುವಾಗ ಕಾಲದ ಭ್ರಾಂತಿಯನ್ನು ನಿರ್ಮಿಸುತ್ತದೆ. ಇದನ್ನು—ಈ ಗತಿಮಂತ ವೃತ್ತಾ ಕೃತಿಯನ್ನು 'ಛಾಯಾ ಭಗವತಿ' [೦] ಎಂಬ ರೂಪದಲ್ಲಿ ಕಂಡಿದ್ದಾರೆ ಪುರಾತ ನರು. ಪ್ಲೇಟೋನ ಗುಹೆ-ಗವಿ ವಿವರಣ ನೋಡು (ಪು. ೧೨ ರಿಂದ ೧೪.)

III

## ಜೀವನ ಸತ್ಯದ ಸ್ವರೂಪ

೧) ಇದು ವ್ಯಕ್ತಿ–ನಿರಪೇಕ್ಷ ಸ್ಥಳ ಹಾಗೂ ಕಾಲದ ಆಚೆಗಿನ ಪಾತಳಿಯ ಮೇಲಿಣ ಕಟ್ಟಡವಾಗಿದೆ.

ಐನ್ಸಟ್‌ನ್ನರ ಪರಿಭಾಷೆಯಲ್ಲಿ, 'Extra Personal Sphere' (of Reality)

೨) ಬಾಳಿನಲ್ಲಿ ಹುದುಗಿರುವ ಅಂತಃಸಂಗತಿಯುಕ್ತ ಅರ್ಥ. ವಿಚಾರ=ಜ್ಞಾನ=ವಿದ್ಯೆ–ವೇದ, ಇದು ತಾತ್ತ್ವಿಕ ಸ್ವಯಂ ಪ್ರಕಾಶಯುಕ್ತ ತತ್ತ್ವವು, ಜೀವನದಲ್ಲಿ ಹಾಸು–ಹೊಕ್ಕು ಆಗಿದೆ. ಪ್ರಾಮಾಣಿಕ ಅನುಭವ, ಧ್ಯಾನಾದಿ ಸಂದರ್ಭದಲ್ಲಿ ಈ 'ಸತ್ಯ' ಹೊಳೆದು ಅರಿಕೆಗೆ ಬರಬಲ್ಲುದು. ಪ್ರಜ್ಞೆ–ಉಪಜ್ಞೆಯು ಇದು=ಉಪದೇಶೇನ ವಿನಾ ಜಾತಂ, ಇಲ್ಲಿ ಪ್ರಜ್ಞೆಯೇ ಋಷಿ; ವಿಶ್ವಾಮಿತ್ರಸ್ಯ ಬ್ರಹ್ಮೇದಂ ರಕ್ಷತಿ ಭಾರತಂ ಜನಂ ।

೩) ಮಾನವನನ್ನು ರೂಪಿಸುವ ಕಾಲವು ಪ್ರಕಾಶಯುಕ್ತ ಆಗಾಮಿ ನಾಳೆಗಳತ್ತ ಸಾಗಿರುವ ನಿನ್ನೆ ಇಂದುಗಳ ರೂಪ ವಿಭಾಗತ್ರಯದ ಗತಿ.

## ಕರ್ತವ್ಯದ ರಂಗ

IV

## ಜೀವನ ವಸ್ತ್ರಪಟದ ಹೆಣಿಕೆ

ಹಗಲು ಸಮಾಜ ಸಮಷ್ಟಿಯ ಪಾತಳಿಯ ಜೀವನ ಇದು ಹಾಸು, ಮತ್ತು ಇರುಳು, ಪ್ರಾಣಲಿಂಗ ಶಕ್ತಿಯ ಜೀವಿತದ ಹೊಕ್ಕು ಇವೆರಡರ ಹಿತಮಿತ ಹೆಣಿಕೆಯ ಮೂಲಕವಾಗಿ ಮಾನವ ಸಂಸ್ಕೃತಿಯ ಪಟ್ಟವಸ್ತ್ರವು ತನ್ನ ತಾನೇ ಸಿದ್ಧವಾಗುವ ಯೋಜನೆ, ಈ ವಿಕಾಸ ತತ್ತ್ವದ ಪ್ರಕ್ರಿಯೆಯಲ್ಲಿ ನೈಸರ್ಗಿಕವಾಗಿಯೇ ಇದೆ.

V

ವಾಕ್ಕು=(ಜಾತವೇದ) ಅಗ್ನಿಃವಾಕ್‌ಭೂತ್ವಾನಮುಖಂ ಪ್ರಾವಿಶತ್ ।

VI

## ಮೃತ್ಯು ತತ್ವ

ಯಮ=ಧರ್ಮ–ವೈವಸ್ವತ ಪ್ರಕಾಶರೂಪ

III

## ಜೀವಿತದ ಪಾತಳಿಯ ಸತ್‌ತ್ಯದ ಅನುಭವದ ಸ್ವರೂಪ

೧) ವಿಷಯ ಹಾಗೂ ಇಂದ್ರಿಯ ಸಂಯೋಗದಲ್ಲಿ ಬರುವ ಈ ಅನುಭವವನ್ನು ಸತ್ + ತ್ಯ ಎಂದು ಸೂಚಿಸುವ ಪುರಾತನರ ವಾಡಿಕೆ ಅರ್ಥಯುಕ್ತವಿದೆ. Empirical Knowledge ಇದು.

೨) ಸ್ಥಳ (ಕಣ್) ಕಾಲ (ಗಣ್) ಈ ವಿಭಾಗದ್ವಯದ ಸಂದರ್ಭದ ಅಸ್ತಿತ್ವದಲ್ಲಿ, ದಿವ್ಯಚಕ್ಷು/ಅಕ್ಷ—ಜ್ಯೋತಿರ್ಲಿಂಗ ಇದುವೇ ಗುರುಸ್ಥಾನವಾಗುವ ಅನಿವಾರ್ಯತೆಯು ಉಂಟು. ಬೋಧಿವೃಕ್ಷ, ಜ್ಞಾನವೃಕ್ಷದ ಫಲ ಈ ಪಡೆ ನುಡಿಗಳು ಇದಕ್ಕೆ ಸಾಕ್ಷಿ. ಇಲ್ಲಿ 'ಪ್ರಾಣಾಃ ವಾ ಋಷಯಃ ।' 'ಆನಂದಂ ಬ್ರಹ್ಮ ರಸೋ ವೈಸಃ ।' ಗಿಲ್ಬರ್ಟ ಮರ್‍ರೆ ಹೇಳುವಂತೆ Failue of Nerves ಈ ಅನುಭವ.

೩) ನರನ ಹುಟ್ಟು ಸಾವಿನ ಈ ವಿಭಾಗ ದ್ವಯದ ಜೀವಿತವು ವೃತ್ತಾಕೃತಿಯ ಕಾಲಗತಿ.

## ಕರ್ಮಿಯ ಕುರುಕ್ಷೇತ್ರ

IV

## ಕತ್ತಲಿನಿಂದ ಆವೃತ

ಜೀವಿತವು ಅಂತರ್–ವಿಸಂಗತ. ಪ್ರೇರಣಾ ದ್ವಂದ್ವಾತ್ಮಕವಿರುವದರಿಂದ ಈ ಪಾತಳಿಯ ಮೇಲೆ ಲೈಂಗಿಕ ಪ್ರವೃತ್ತಿಗೇ ಪ್ರಾಧಾನ್ಯವು ಪ್ರಾಪ್ತವಾಗುವ ಅನಿವಾರ್ಯತೆಯಿದೆ.

ಇಂದಿನ ಋಗ್ವೇದದ ರಾತ್ರಿಹಾಸು (ಅಹಃ ಚ ಕೃಷ್ಣಂ) ಮತ್ತು ಹಗಲು ಹೊಕ್ಕು (ಅಹಃ ಅರ್ಜುನಂ ಚ) ಎಂಬ ಈ ತಿರುವು ಮುರುವು ಇರುವ ಈ ವೇದವು. ನರ(ಳ) ಸಂಪ್ರದಾಯದ ಪಾತ ಎಂಬುದನ್ನು ಸಾರಿಹೇಳುತ್ತದೆ.

V

## ಲಿಂಗಾಂಗ ಯೋಗದ ಗೀರ್ವಾಣ ವಾಣಿ

VI

## ಮೃತ್ಯುತತ್ತ್ವ

ಕಾಲಿ=ಕರಿಯ ಕೃಷ್ಣ ರುದ್ರ=ಚಾಂದ್ರ ಶಕ್ತಿ : ಅನಿವಾರ್ಯ; ತುರ್ತ–ಪರಿಸ್ಥಿತಿ, ಆಪತ್ತು, ಪ್ರಳಯದ ದಿಕ್ಕು.

